ಶ್ರೀ ಕೃಷ್ಣ ಚಂದ್ರರ

# ಅನ್ನದಾತ

(ಬಂಗಾಲದ ಬರಗಾಲದ ಕತೆ)



ವೀ. ಚ ಹಿತ್ತಲಮನಿ



೧೯೪೭

# ಪರಿವಿಡಿ

# ಕತೆಗಾರರ ಪರಿಚಯ

ಸಣ್ಣ ಕಥಾಕ್ಷೇತ್ರವು ಪೂರ್ತಿಯಾಗಿ ಬೆಳಿಗೆಹೊಂದಿ ಅರ್ವಾಚೀನ ಉರ್ದು ಕಥಾಸಾಹಿತ್ಯದ ಬಹುಭಾಗವನ್ನು ಆಕ್ರಮಿಸಿಬಿಟ್ಟಿದೆ. ಸಣ್ಣ ಕಥಾ ಕ್ಷೇತ್ರವು ಬೆಳೆಯುತ್ತಿರುವದಕ್ಕೆ ಅನೇಕ ಕಾರಣಗಳಿವೆ. ನಿರಕ್ಷರತೆಯಲ್ಲಿ ಮುಳುಗಿಹೋದ ನಾಡಿನಲ್ಲಿ ಆರ್ಥಿಕ ಪರಿಸ್ಥಿತಿಯ ಮಟ್ಟವೂ ತೀರ ಕೆಳಗಿನ ತರಗತಿಯಲ್ಲಿರುತ್ತದೆ; ಅಂಥ ನಾಡಿನ ಜನರು ಪುಸ್ತಕ ಕೊಳ್ಳುವದೂ ಒಂದು ದುಂದುಗಾರಿಕೆಯೆಂದು ಭಾವಿಸುವರು. ಬರೀಯ ಪುಸ್ತಕ ಬರೆಯುವದನ್ನೇ ತಮ್ಮ ಮುಖ್ಯ ಕೆಲಸವಾಗಿಟ್ಟುಕೊಂಡು ಯಾವ ಬರಹಗಾರನೂ ಹೊಟ್ಟೆ ತುಂಬಿಕೊಳ್ಳಲಾರನು. ಹೊಟ್ಟೆಯ ಪಾಡಿಗಾಗಿ ಬೇರೆ ಕೆಲಸಗಳನ್ನು ಮಾಡ ಬೇಕಾಗುವದು. ಕೆಲಸ ಮಾಡಿ, ಉಳಿದ ವೇಳೆಯಲ್ಲಿ ಸಾಹಿತ್ಯಸೇವೆ ಮಾಡ ಬೇಕಾಗುವದು. ವಾರಕ್ಕೊಂದು ಸಲ ಸಿಕ್ಕುವ ಅಲ್ಪ ಬಿಡುವಿನಲ್ಲಿ ಕಾದಂಬರಿ ಇಲ್ಲವೆ ಗಹನವಾದ ಮತ್ತಿತರ ಪುಸ್ತಕಗಳನ್ನು ಬರೆಯುವದು ಅವರಿಗೆ ಸಾಧ್ಯ ವಿಲ್ಲ. ಆದುದರಿಂದ ತರುಣ ಲೇಖಕರ ಪಾಲಿಗೆ ಸಣ್ಣ ಕಥಾಕ್ಷೇತ್ರವೊಂದೇ ಉಳಿಯುವದು. ಪರಿಸ್ಥಿತಿಯು ಹೀಗೆ ಅವರನ್ನು ಸಣ್ಣ ಕತೆಗಳನ್ನು ಬರೆಯ ಲಿಕ್ಕೆ ಬಲವಂತ ಪಡಿಸಿದರೂ ಅದನ್ನೇ ಅವರು ಸುಸಂಧಿಯೆಂದು ತಿಳಿದು ಕೊಂಡು ಕತೆಗಳನ್ನು ಅತ್ಯಾದರದಿಂದೂ ಉತ್ಸಾಹದಿಂದಲೂ ಬರೆಯುತ್ತಾರೆ. ಕೆಲವು ಕತೆಗಳಂತೂ, ಅತ್ಯುನ್ನತ, ಅರ್ಥಗರ್ಭಿತ, ಭಾವನಾಪ್ರಧಾನ ಕೃತಿಗಳಾ ಗಿವೆ. ಅಂಥ ಕತೆಗಳು ವಿಶ್ವದ ಯಾವದೇ ನುಡಿಯಲ್ಲಿಯ ಕತೆಗಳಿಗಿಂತ ಶ್ರೇಷ್ಠ ಸ್ಥಾನದಲ್ಲಿ ತಲೆಯೆತ್ತಿ ನಿಲ್ಲಬಲ್ಲವು.

ಮೂವತ್ತೊಂದು ವರುಷ ವಯಸ್ಸಿನಲ್ಲಿಯೇ ಕೃಷ್ಣಚಂದ್ರರು ಉರ್ದು ಸಾಹಿತ್ಯದಲ್ಲಿ ಅತ್ಯುತ್ತಮ ಕತೆಗಾರರೆಂದು ಪ್ರಸಿದ್ಧಪಡೆದಿದ್ದಾರೆ. ಅವರು ಬರೆಯಲಿಕ್ಕೆ ಹತ್ತಿ ಎಂಟು ವರುಷಗಳು ಸಂದಿವೆ; ಅಮೇರಿಕೆಯ ಮಿಶನರಿಗಳ 'ಫಾರಮನ್ನ ಕ್ರಿಶ್ಚನ್ನ ಕಾಲೇಜ'ದಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಬರೆಯಲಿಕ್ಕೆ ಸುರುವು ಮಾಡಿದರು. ಈಗಾಗಲೇ ಅವರ ಅರ್ಧ ಡಜನ್ನ ಕಥಾಸಂಗ್ರಹಗಳು ಅಚ್ಚಾಗಿವೆ. ಪ್ರಬಂಧ ನಾಟಕಗಳ ಒಂದೊಂದು ಗ್ರಂಥಗಳು ಪ್ರಕಟವಾಗಿವೆ. 'ಶಿಕಸ್ತ' ವೆಂಬುದು ಅವರು ಬರೆದ ಮೊದಲು ಕಾದಂಬರಿ; ಮೊನ್ನೆ ಮೊನ್ನೆ

ಅಚ್ಚಾಗಿದೆ; ಅದು ಅಪೂರ್ವವಾಗಿದೆಯೆಂದು ಎಲ್ಲರೂ ಹೊಗಳಿದ್ದಾರೆ. ಕೃಷ್ಣ ಚಂದ್ರರು ಅಪ್ರತಿಮ ಕತೆಗಾರರಾಗಿದ್ದಾರೆ. ಅವರ ಹೆಸರು ಗಳಿಸಿದ್ದಾದರೂ ಕತೆಗಾರರೆಂದೇ ! ' ತನ್ನ ನುಡಿಯಲ್ಲಿ ತಾನೊಬ್ಬ ಆದರ್ಶ ವ್ಯಕ್ತಿಯಾಗಬೇಕು; ಒಳ್ಳೇಯ ಬರಹಗಾರನಾಗಲು ಯಾವನಾದರೊಬ್ಬ ಪ್ರಖ್ಯಾತ ವಿದೇಶಿಯ ಬರಹಗಾರನನ್ನು ಅನುಕರಿಸಬೇಕು ' ಇವೇ ಮೊದಲಾದ ವಿಷಯಗಳ ಕಡೆಗೆ ಲಕ್ಷಕೊಡದೆ, ಸ್ವಪ್ರಯತ್ನದಿಂದ ಹೆಣಗಾಟ ನಡೆಯಿಸಿ, ತಮ್ಮ ಕೃತಿಗಳನ್ನು ಆಗಾಗ ವಿಮರ್ಶೆಯ ವರೆಗಲ್ಲಿಗೆ ಹಚ್ಚಿ ಪರೀಕ್ಷಿಸಿಕೊಂಡು, ಆಳವಾದ ವಿಚಾರ ಗಳನ್ನು ಸಾದಾ ಮತ್ತು ಸ್ಪಷ್ಟ ಶಬ್ದಗಳಲ್ಲಿ ಜನತೆಯ ಮುಂದಿಡಲು ಕಲಿತರು. ಅವರು ತಮ್ಮ ಬಾಲ್ಯ ಮತ್ತು ಯೌವನಗಳನ್ನು ಕಾಶ್ಮೀರದಲ್ಲಿಯೇ ಕಳೆದುದರ ಪರಿಣಾಮವಾಗಿ, ಮೊದಮೊದಲು ಕಾವ್ಯಮಯವಾದ ಕಾಶ್ಮೀರದ ದೃಶ್ಯವನ್ನೇ ಹಿನ್ನೆಲೆಯಾಗಿಟ್ಟುಕೊಂಡು ಎಷ್ಟೋ ಅನನುಭವಿಕ, ಅಪಕ್ವ ಕಾಲ್ಪನಿಕ ಪ್ರೇಮ ಕತೆಗಳನ್ನು ಬರೆಯುತ್ತಿದ್ದರು; ಆದರೆ ಇಂದು ಅವರೊಬ್ಬ ನುರಿತ ಅನುಭವಿಕ ಲೇಖಕರಾಗಿದ್ದಾರೆ. ಮಾನವರ ಅಂತರಾಳವನ್ನು ಹೊಕ್ಕು, ಎಷ್ಟೋ ಸಾಮಾ ಜಿಕ ವಿಷಯಗಳ ಬಗೆಗೆ ಪರಿಶೀಲನೆಗಳನ್ನು ನಡೆಯಿಸಿ, ತಮ್ಮದೇ ಆದ ಅಪೂರ್ವ ಶೈಲಿಯಲ್ಲಿ ಬರೆಯಬಲ್ಲರು. ದಲಿತರಿಗಾಗಿ, ಪರೋಪಕಾರ ಮತ್ತು ಅಸ್ಫುಟ ಅಂತಃಕರಣಗಳೇ ಅವರ ಮೊದಲಿನ ಕೃತಿಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದವು. ಆದರೆ ಇಂದು ಅವರ ಕೃತಿಗಳಲ್ಲಿ ಮಾನವರ ಪ್ರಾರಬ್ಧಗಳನ್ನು ರೂಪಿಸುವ ಅರ್ಥಿಕ ಮತ್ತು ರಾಜಕೀಯ ವಿಷಯಗಳ ಸ್ಪಷ್ಟ ವಿಭಜನೆಯು ಕಂಡುಬರುತ್ತದೆ.

ಅವರ ಎಲ್ಲ ಕತೆಗಳಿಗಿಂತ ಸಾಮಾಜಿಕ ದೃಷ್ಟಿ ಸ್ಪಷ್ಟವಾಗಿ 'ಅನ್ನದಾತ' ಕತೆಯಲ್ಲಿ ಎದ್ದು ತೋರುತ್ತದೆ. ಪ್ರಕಟವಾದೊಡನೆಯೇ ಅದು ತುಂಬಾ ಮೆಚ್ಚುಗೆ ಪಡೆಯಿತು. ಬಂಗಾಲದ ಬರಗಾಲದ ಬಗೆಗೆ ಭಾರತದ ಯಾವ ನುಡಿಯಲ್ಲಿಯೂ ಇಷ್ಟೊಂದು ಸುಂದರ,ಹೃದಯದ್ರಾವಕ ಕತೆಯನ್ನು ಯಾರೂ ಬರೆದಿಲ್ಲ. ಮುನ್ನಡೆದ ಉರ್ದುಕಥಾ ಸಾಮ್ರಾಜ್ಯದಲ್ಲಿ ಈ ಕತೆಯೊಂದು ಬಾಂದುಗಲ್ಲು ! ಇದೊಂದು ಪ್ರಗತಿಶೀಲ ಕತೆ; ಈ ಕತೆಯಲ್ಲಿ ಸಾಮಾಜಿಕ ಕುಂದುಕೊರತೆಗಳನ್ನು ಎತ್ತಿ ತೋರಿಸುವ ದೂರದೃಷ್ಟಿಯನ್ನು ಲೇಖಕರು ಇಟ್ಟುಕೊಂಡಿದ್ದಾರೆ. ಈ ಕತೆಗೆ ಬಳೆಯಿಸಿಕೊಂಡ ಕ್ರಾಂತಿಯೆಬ್ಬಿಸುವ ತಂತ್ರ

ವನ್ನು ಕಂಡು ವಿಮರ್ಶಕರು ದಂಗು ಬಡಿದಿದ್ದಾರೆ. ಪ್ರಜ್ವಲಿಸುವ ಕಥಾವಸ್ತುವನ್ನು ಆಯ್ದುಕೊಂಡ ಕೃಷ್ಣಚಂದ್ರರ ಪ್ರತಿಭೆಯನ್ನು ಕಂಡು ಸಹಬರಹಗಾರರು ಕರುಬಿದ್ದಾರೆ. ಸಾಸಿರ ಸಾಮಾನ್ಯ ಓದುಗರ ಹೃದಯವನ್ನು ಈ ಕತೆಯು ಆವರಿಸಿಬಿಟ್ಟಿದೆ. ಓದುಗರು ಈ ಕತೆಯೊಂದಿಗೆ ತೇಲಿಹೋಗುತ್ತಾರೆ. ಇದೊಂದು ಸ್ಪಷ್ಟ ಕರುಣಾಜನಕ ಕೃತಿ! ಈ ಕತೆಯಲ್ಲಿ ಕೃತ್ರಿಮತೆಯ ಸುಳಿವೂ ಕೂಡ ಇಲ್ಲ. ಓದುಗರಿಗೆ ಓಮುಸ್ತ ನಡೆದಂತೆ ತಮ್ಮನ್ನೇ ಉದ್ದೇಶಿಸಿ ಬರೆದಂತೆನಿಸುತ್ತದೆ. ಇದೊಂದು ಬಿತ್ತರವಾದ, ಭೀಕರವಾದ ಸಾಮಾಜಿಕ ಸಮಸ್ಯೆಗಳನ್ನು ಎತ್ತಿ ತೋರಿಸುವ ಅಭೂತಪೂರ್ವ ಕಲಾಕೃತಿ. ಯಾವತ್ತೂ ಜನತೆಯ ನಿರ್ಗತಿಕತನವನ್ನು, ಜನಸಾಮಾನ್ಯರ ದುಃಖವನ್ನು ಒಬ್ಬ ಮಾನವನ ಅನುಭವಗಳಲ್ಲಿ ಅಳವಡಿಸಿ ಈ ಕತೆಯನ್ನು ಕಟ್ಟಿದ್ದಾರೆ. ಜನತೆಯ ದುಃಖ, ದುರಂತಗಳ ಭೀಕರ ಚಿತ್ರಗಳು ಮರೆಯಾಗದೆ, 'ಅನ್ನದಾತಾ' ಕತೆಯಲ್ಲಿ ಸ್ಪಷ್ಟವಾಗಿ ಎದ್ದು ನಿಂತಿವೆ.

ಒಂದೇ ಒಂದು ಕತೆಯನ್ನು ಮೂರು ಬೇರೆ ಬೇರೆ ದೃಷ್ಟಿಕೋನಗಳಿಂದ ಕಾಣುವ ಕುಶಲತೆಯ ಅದ್ಭುತ ತಂತ್ರ ಬಳಸಿಕೊಂಡುದೇನೂ ಸಾಮಾನ್ಯ ಮಾತಲ್ಲ. ಸಮಾಜದ ವಾಸ್ತವ ಚಿತ್ರಗಳನ್ನು, ಸೋಜಿಗತೆಯ ಬಣ್ಣ ಬಳಿಯದೆ, ಓದುಗರ ಮುಂದಿಡುವದಕ್ಕೆಂದೇ ಈ ಕತೆಯನ್ನು ಬರೆದಿದ್ದಾರೆ. ಪ್ರತಿಯೊಂದು ಸಾಲಿನಲ್ಲಿಯೂ, ಅನುರಾಗ ಸರಳತೆಗಳು ಎದ್ದು ತೋರದಿದ್ದ ಕಥೆ-ತಂತ್ರವೆಂಥದಿದ್ದರೂ ವಿಜಯಿಯಾಗುತ್ತಿರಲಿಲ್ಲ. ಕತೆ ರೂಪುಗೊಂಡುದು ಕತೆಗಾರರ ಹೃದಯದಿಂದ! ಅಂತೆಯೇ ಓದುಗರ ಮೇಲೆ ಪರಿಣಾಮ ಮಾಡುತ್ತದೆ. ಹೃದಯದಲ್ಲಾದ ಈ ಪರಿಣಾಮದ ಫಲವಾಗಿಯೇ ಅವರ ಈ ಕೃತಿ ಆದರ್ಶ ಕಲಾಕೃತಿಯಾಗಿದೆ.

ಭಾರತದ ಒಳಹೊರಗಿನ ಲಕ್ಷಾಂತರ ಉರ್ದು ತಿಳಿಯದ ಓದುಗರಿಗೆಂದು ಇದನ್ನು ಇಂಗ್ಲೀಷಿಗೆ ಭಾಷಾಂತರಿಸಿದ್ದೇನೆ. ಕೃಷ್ಣಚಂದ್ರರ ಮೂಲದಲ್ಲಿಯ ಸುಂದರವಾದ, ಪ್ರತಿಧ್ವನಿಸುವ ಶಬ್ದಪ್ರಯೋಗವನ್ನು ಇಲ್ಲಿ ಇಳಿಸುವದರಲ್ಲಿ ನಾನು ಸಂಪೂರ್ಣ ವಿಜಯವನ್ನು ಪಡೆಯದಿದ್ದರೂ, ಭಾರತದ ಹೃದಯದ್ರಾವಕ ದುರಂತದ ಚಿತ್ರಗಳನ್ನೊಳಗೊಂಡ ಈ ಉನ್ನತ ಕತೆಯ ಸೌಂದರ್ಯ, ಮಾಧುರ್ಯಗಳು ಭಾಷಾಂತರದಲ್ಲಿ ಬರುವಂತೆ ಹೆಣಗಿದ್ದೇನೆಂದು ಹೇಳಬಹುದು.

**ಕ್ವಾ. ಅ. ಅ.**

# ನನ್ನ ನುಡಿ

ಉರ್ದು ತಿಳಿಯದ ಲಕ್ಷಾಂತರ ಭಾರತದ ಒಳಹೊರಗಿನ ಓದುಗರಿಗೆಂದು ಕ್ವಾಜಾ ಅಹಮ್ಮದ ಅಬ್ಬಾಸರು ' ಅನ್ನದಾತಾ ' ಕತೆಯನ್ನು ಮೂಲ ಉರ್ದು ವಿನಿಂದ ಇಂಗ್ಲೀಷಿಗೆ ಭಾಷಾಂತರಿಸಿ ' ಸಾಯಲಾರೆ ' ನೆಂದು ನಾಮಕರಣ ಮಾಡಿದ್ದರು. ಇಂಗ್ಲೀಷು ತಿಳಿಯದ ಸಹಸ್ರಾರು ನನ್ನ ಕನ್ನಡ ಸಹೋದರ ಸಹೋದರಿಯರಿಗೆ ಓದಲು ಅನುಕೂಲವಾಗಬೇಕೆಂದು ನಾನು ಕನ್ನಡಿಸಿದ್ದೇನೆ; ಮೂಲ ಉರ್ದುವಿನಿಂದಲೇ ಕನ್ನಡಿಸಿದ್ದರೆ ಚನ್ನಾಗಿರುತ್ತಿತ್ತು; ಆದರೆ ನನಗೆ ಆ ಭಾಗ್ಯವಿಲ್ಲ; ಇಂಗ್ಲೀಷದಿಂದ ಕನ್ನಡಿಸಿದ್ದೇನೆ; ಆದುದರಿಂದ ಈಗಾಗಲೇ ಮೂಲಕ್ಕೂ ಈಗ ನಿಮ್ಮ ಮುಂದಿರುವದಕ್ಕೂ ಎಷ್ಟೋ ಅಂತರವಾಗಿರಬಹುದು; ಭಾಷಾಂತರಿಸುವನೇನೂ ಸಾಮಾನ್ಯ ವಿಷಯವಲ್ಲ; ಸ್ವಂತ ಕೃತಿರಚನೆ ಗಿಂತಲೂ ಕಠಿನವಾದುದು; ಅದರಲ್ಲಿಯೂ ಇಂಗ್ಲೀಷದಿಂದ ಭಾರತೀಯ ಯಾವದೇ ನುಡಿಗೆ ಭಾಷಾಂತರಿಸುವದು ಕಷ್ಟಕರವಾದ ಮಾತು! ಇಂಗ್ಲೀಷ ಭಾಷೆಯ ರಚನೆಯೇ ಬೇರೆ; ಭಾರತ ಭಾಷೆಗಳ ರಚನೆಯೇ ಬೇರೆ; 'ಭಾಷಾಂತರಕಾರರು ಕೊಲೆಗಡಕ'ರೆಂದು ಆಂಗ್ಲರೇ ಹೇಳುತ್ತಾರೆ; ಕೊಲೆ-ಯಾಗುವದೆಂದು ಅಂಜಿ ಕುಳಿತರೆ, ಪರಭಾಷೆಯಲ್ಲಿರುವ ಉತ್ತಮ ಕೃತಿಗಳು ನಮ್ಮ ನುಡಿಗೆ ಬರಲಾರವು; ಕೊಲೆ ನಡೆಯುವದು ಅನಿವಾರ್ಯವಾಗಿದ್ದಲ್ಲಿ, ಕ್ರೂರ ನಿರ್ದಯತನದಿಂದ ಅಮಾನುಷವಾಗಿ ಕೊಲೆ ಮಾಡುವದರ ಬದಲು ಸೌಮ್ಯ ಸಾಧನದಿಂದ ಕೊಲೆಮಾಡಬಹುದಲ್ಲವೆ?..................ಏನೇ ಆಗಲಿ ಕನ್ನಡಿಸುವ ಸಾಹಸಕ್ಕೆ ಕೈಹಾಕಿದ್ದೇನೆ; ಎಷ್ಟೋ ಕಡೆಯಲ್ಲಿ ಮೂಲದ ಸ್ಪಷ್ಟ ಚಿತ್ರ ಮೂಡಿರಲಿಕ್ಕಿಲ್ಲ; ಮತ್ತೆ ಎಷ್ಟೋ ಕಡೆಯಲ್ಲಿ ಸಹಜಸಾಧ್ಯವಾದ ಇಂಗ್ಲೀಷು ವಾಕ್ಯರಚನೆಗಳ ಪ್ರಭಾವವು ಮೂಡಿದ್ದರೂ ಮೂಡಿರಬಹುದು; ಆದರೆ ಒಂದು ಮಾತ್ರ ನಿಜ! ಕತೆ ಮೂಲಕ್ಕಿಂತಲೂ (ಇಂಗ್ಲೀಷ) ಕನ್ನಡದಲ್ಲಿ ಹಲವಾರು ಕಡೆಯಲ್ಲಿ ಹೆಚ್ಚು ಸುಂದರವೂ ಸ್ಫುಟವೂ ಆಗಿದೆ.............ಅದಕ್ಕೆ

ನಾನು ಹೊಣೆಯಲ್ಲ; ಕಳೆಯೇ ಕಾರಣವು: ಕತೆ ಭಾರತಕ್ಕೆ ಸಂಬಂಧಪಟ್ಟದ್ದು ಅದನ್ನು ಭಾರತೀಯ ನುಡಿಯಲ್ಲಿ ಹೇಳಿದರೇನೇ ಸೊಗಸಾಗುವದು; ಭಾರತದ ರೀತಿನೀತಿಗಳನ್ನು ಹಲವುಸಲ ಭಾರತದ ಹೊರಗಿನ ಭಾಷೆಯಲ್ಲಿ ಸ್ಪಷ್ಟಪಡಿಸ್ಸು ವದು ಸಾಧ್ಯವಿಲ್ಲ;............ಆದರೂ ಕ್ವಾಜಾ ಅಹಮ್ಮದ ಅಬ್ಬಾಸರು ಶಕ್ತಿ-ಮೀರಿ ಮೂಳದ ಸೌಂದರ್ಯವನ್ನು ಇಂಗ್ಲೀಷದಲ್ಲಿ ತರಲು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ; ಇಂಗ್ಲೀಷನ್ನು ಬಲ್ಲ ಕನ್ನಾಡಿನವರು ಅದನ್ನೊಮ್ಮೆ ಓದಲೇಬೇಕು. ಉರ್ದುಬಲ್ಲ ಭಾಗ್ಯಶಾಲಿಗಳು ಮೂಲವನ್ನೇ ಓದುವ ಸುಸಂಧಿ ದೊರಕಿಸಿಕೊಳ್ಳಲಿ! ಉರ್ದುವಿನಲ್ಲಿಯ ಕತೆಯನ್ನು ಒಂದುಸಲ ಯಾರಿಂದಾದರೂ ಓದಿಸಿ ಕೇಳಬೇಕೆಂದಿದ್ದೆ; ಆದರೆ ಅಂಥ ಮಹನೀಯರು ಯಾರೂ ಸಿಕ್ಕಲಿಲ್ಲ; ಮೇಲಾಗಿ ಉರ್ದು ಕೃತಿಯೂ ಸಿಕ್ಕಲಿಲ್ಲ.

ಲೇಖಕರ ಬಗೆಗೆ ಮತ್ತು ಕತೆಯ ಬಗೆಗೆ ಕ್ವಾಜಾ ಅಹಮ್ಮದ ಅಬ್ಬಾ-ಸರು ಸಾಕಷ್ಟು ಬರೆದಿದ್ದಾರೆ; ನಾನೇನೂ ಹೆಚ್ಚಿಗೆ ಹೇಳುವದಿಲ್ಲ; ಬಂಗಾಲಕ್ಕೆ ಬರಗಾಲ ಬಂತು; ಅದೂ ಅನಿರೀಕ್ಷಿತವಾಗಿ ಒಮ್ಮೆ ಮಾತ್ರ! ಆದರೆ ನಮ್ಮ ನಾಡಿನಲ್ಲಿ ವಿಜಾಪುರ ಮೊದಲಾದ ಕೆಲವು ಕಡೆಯಲ್ಲಿ ಪ್ರತಿ ವರುಷ ಬರಗಾಲ ಬೀಳುತ್ತದೆ; ನಮ್ಮ ಬರಗಾಲ ಬಂಗಾಲದಷ್ಟು ಉಗ್ರವಾಗಿರಲಿಕ್ಕಿಲ್ಲ; ಆದರೂ ಅದು ನಮ್ಮ ಲೇಖಕರ ಮೇಲೆ ಯಾವ ಪರಿಣಾಮವನ್ನೂ ಮಾಡಿಲ್ಲವೆ? ಬರಗಾಲದಲ್ಲಿ ಬಳಲುವ ಹೃದಯಗಳನ್ನು ಕಂಡು ನಮ್ಮ ಲೇಖಕರ ಅಂತರಾಳದಲ್ಲಿ ಯಾವ ಬದಲಾವಣೆಯಾಗಿದೆ? ಯಾರಿಂದ ಇಂಥ ಕೃತಿರತ್ನ ಹೊರಗೆ ಬಂದಿವೆ?......................ಈ ದೃಷ್ಟಿಯಲ್ಲಿ ಇದೊಂದು ಮಾದರೀಯ ಕತೆ ಯಾದೀತು. ‘ ಕತೆ ಹೃದಯದಿಂದಲೇ ರೂಪುಗೊಂಡು ಬಂದರೇನೇ ಅದರ ಪರಿಣಾಮ ಓದುಗರ ಮೇಲಾಗುತ್ತದೆ’ ಯೆಂಬುದಕ್ಕೆ ಇದೊಂದು ಅಖಂಡ ದೃಷ್ಟಾಂತ.

ಮೊದಲನೆಯ ಭಾಗದಲ್ಲಿ, ಬರಗಾಲದ ಬಗೆಗೆ ಪರಿಸ್ಥಿತಿಯನ್ನು ಪರಿಸೀಲಿಸಿ ವರದಿ ಮಾಡುವದಕ್ಕೆಂದು ಕಳುಹಿದ ವಿದೇಶೀಯ ಹೃದಯಹೀನ, ರಾಯ ಭಾರಿಯೊಬ್ಬನ ಸ್ಪಷ್ಟ ಚಿತ್ರವಿದೆ; ಸ್ವತಃ ಕಣ್ಣೆದುರಿನಲ್ಲಿ ಹಸಿವೆಯಿಂದ ಜನರು ಸತ್ತು ಬೀಳುತ್ತಿದ್ದರೂ, ಬರಗಾಲವಿದೆಯೆಂಬುದು ಖಚಿತವಾಗಿ ಅವನಿಗೆ ಗೊತ್ತಾಗಲಿಲ್ಲವಂತೆ, ಏಕಂದರೆ ಆ ಬಗೆಗೆ ಸರಕಾರವು ಅಧಿಕೃತ ಪ್ರಕಟನೆ

ಯನ್ನು ಹೊರಡಿಸಲಿಲ್ಲವಂತೆ. ಇದೆಂಥ ಅಣಕಾಟ! ಎರಡನೆಯ ಭಾಗದಲ್ಲಿ ಆಗರ್ಭ ಶ್ರೀಮಂತನಾದ ಸುಶಿಕ್ಷಿತ ತರುಣ ಕಲಾವಿದನನ್ನು ಕಾಣಬಹುದು; ಹಸಿವೆಯಿಂದ ನರಳುವ ಬಾಂಧವರಿಗಾಗಿ ಮನದಲ್ಲಿ ಮರಗುತ್ತಿದ್ದರೂ ಕಾರ್ಯತಃ ಅವನು ಏನೂ ಮಾಡುವದಿಲ್ಲ; ಮೇಲಾಗಿ ಬರಗಾಲದ ಪರಿಸ್ಥಿತಿಯನ್ನು ತಾನು ದೊಡ್ಡವನಾಗಲು ಹೇಗೆ ಅಳವಡಿಸಿಕೊಳ್ಳಬೇಕೆಂಬುದನ್ನೇ ಚಿಂತಿಸಿ ಗಾಳಿಯಲ್ಲಿ ಗೋಪುರ ಕಟ್ಟುತ್ತಿರುತ್ತಾನೆ. ಮೂರನೆಯ ಭಾಗದಲ್ಲಿ ಭೀಕರ ಬರಗಾಲದ ದುರಂತಕ್ಕೆ ನೇರವಾಗಿ ಬಲಿಯಾದ ದುರ್ದೈವಿ ತರುಣನ ಚಿತ್ರವು ಅವನ ಮುದ್ದಿನ ಮಡದಿ, ಮೋಹದ ಮಗಳೊಂದಿಗೆ ತಾಂಡವವಾಡುತ ನಿಂತಿದೆ; ಕತೆಯ ವಸ್ತು ಎಂಥ ಕಲ್ಲೆದೆಯನ್ನೂ ಅಲುಗಾಡಿಸಬಲ್ಲದು; ಮೂರನೆಯ ಭಾಗವನ್ನು ಕಣ್ಣೀರು ಹಾಕುತ್ತ ಓದದೆ ನಿರ್ವಾಹವೇ ಇಲ್ಲ;

ನೀವೇ ಒಮ್ಮೆ ಓದಿರಿ; ಅಂದರೆ ಕತೆಯ ಯಥಾರ್ಥಕಲ್ಪನೆಯು ತಾನೆಯಾಗುತ್ತದೆ.

ಕನ್ನಡದಲ್ಲಿ ಈ ಪುಸ್ತಕವನ್ನು ಪ್ರಕಟಿಸಲು ಅತ್ಯಾದರದಿಂದಲೂ, ಪ್ರೇಮದಿಂದಲೂ ಅನುಮತಿಯಿತ್ತ ಶ್ರೀ. ಕೃಷ್ಣ ಚಂದ್ರರಿಗೂ, ಪಡಿಯಚ್ಚುಗಳನ್ನು ಒದಗಿಸಿಕೊಟ್ಟ 'ಕುತುಬ' ಪ್ರಕಟನಾಲಯದ ಶ್ರೀ. ಪಿ. ಕೆ. ಮೆಸ್ತ್ರಿ ಅವರಿಗೂ ಎಷ್ಟು ಕೃತಜ್ಞತೆಗಳನ್ನರ್ಪಿಸಿದರೂ ಕಡಿಮೆಯೆ! ಈ ಪುಸ್ತಕ ಪ್ರಕಟಿಸುವಲ್ಲಿ ಎಷ್ಟೋ ಗೆಳೆಯರು ನೆರವಾಗಿದ್ದಾರೆ. ಅವರಲ್ಲಿ ಗೆಳೆಯರಾದ ವಿಠ್ಠಲ ಆಪ್ಟೆ, ವೆಂಕಟೇಶ ಪುರಾಣಿಕ, ಮತ್ತು ದೇವೇಂದ್ರ ವಗೂರ ಇವರು ಮುಖ್ಯರು. ಅವರೆಲ್ಲರಿಗೂ ನನ್ನ ಅನಂತ ವಂದನೆಗಳು. ಅದೆಷ್ಟೋ ಪ್ರೇಮ ವಾತ್ಸಲ್ಯದಿಂದ ಹಿರಿಯರಾದ ಶ್ರೀ. ಶಂ.ಬಾ. ಜೋಶಿ ಅವರು ಮುಂದೆ ಬಂದು ಪ್ರಕಟನೆಯ ಭಾರ ಹೊತ್ತಿದ್ದಾರೆ; ಅವರಿಗೆ ನನ್ನ ಅನಂತ ವಂದನೆಗಳು. ಸ್ವಲ್ಪೇ ಸಮಯದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಂಥ ಶ್ರೀ. ನವಿಲೂರ ಎಚ್. ಬಿ. ಅವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಪುಣೆ,
ಒಕ್ಕಲತನದ ಕಾಲೇಜು.
೧—೧೦—೪೭

ಎಸ್. ಬಿ. ಹಳ್ಳಿಕೇರಿ.

ಒಂದನೆಯ ಭಾಗ

# ಅಪರಾಧಿ ಹೃದಯದ ಮನುಷ್ಯ

(ವಿದೇಶಿಯ ರಾಯಭಾರಿ ಮನುಷ್ಯನೊಬ್ಬನು ತನ್ನ ದೇಶದಲ್ಲಿಯ ಸರಕಾರದ ಮುಖ್ಯಾಧಿಕಾರಿಗೆ ಕಲಕತ್ತೆಯಿಂದ ಬರೆದ ಓಲೆಗಳು.)

## ೧

ಜ್ಯೋತ್ಸ್ನಾವಿಹಾರ

ಕಲಕತ್ತಾ

ಅಗಷ್ಟ ೮, ೧೯೫೩

ಪ್ರಭುಗಳ ಸನ್ನಿಧಿಗೆ—

ಕಲಕತ್ತೆಗೆ ಇಂದು ಮುಟ್ಟಿದೆನು. ಕಲಕತ್ತೆಯು ಹಿಂದುಸ್ತಾನದಲ್ಲೆಲ್ಲ ಅತಿದೊಡ್ಡದಾದ ನಗರವು. ಹಿಂದುಸ್ತಾನದಲ್ಲಿಯೇ 'ಹೌರಾಪೂಲು' ಅದ್ಭುತವಾಗಿದೆ; ಹಿಂದುಸ್ತಾನದಲ್ಲಿಯ ಬಂಗಾಲಿಗಳು ಶ್ರೇಷ್ಠ ಮೇಧಾವಿಗಳು; ಹಿಂದುಸ್ತಾನದಲ್ಲಿ ಕಲಕತ್ತೆಯ ವಿಶ್ವವಿದ್ಯಾಲಯವು ಅತಿ ದೊಡ್ಡ ವಿಶ್ವವಿದ್ಯಾಲಯವು; ಹಿಂದುಸ್ತಾನದಲ್ಲೆಲ್ಲ ಅತಿ ಭೀಕರವಾದ ಪುಂಡ ಜಿಲ್ಹೆಯೆಂದರೆ 'ಸೋನಾಗಚಿ' ಜಿಲ್ಹೆ; ಕಲಕತ್ತೆಯ ನೆರೆಯಲ್ಲಿರುವ ಸುಂದರ ಬನಗಳು ಜನಪ್ರಿಯವಾದ ಹುಲಿ ಬೇಟೆಯ ಸ್ಥಳಗಳು: ಕಲಕತ್ತೆಯು ವಿಶ್ವದ ಜೂಟದ ದೊಡ್ಡ ಕೇಂದ್ರವು; ಕಲಕ್ಕತ್ತೆಯಲ್ಲಿ ಜನಪ್ರಿಯವಾದ ಮಿಠಾಯಿಯೆಂದರೆ "ರಸಗುಲ್ಲಾ" ಅದನ್ನು ಮೊದಲು ತಯಾರಿಸಿದವಳು ಒಬ್ಬ ಸೂಳೆಯಂತೆ; ದುರ್ದೈವದಿಂದ ಅದರ ಮಾಲ್ಕೀ ಹಕ್ಕು ಆಕೆಗೆ ದೊರೆಯಲಿಲ್ಲ; ಆಗ್ಗೆ ಹಿಂದು

ಸ್ತಾನ ಸರಕಾರದ ಕಾಯಿದೆಯಲ್ಲಿ ಅಂಥದೊಂದು ಸಂರಕ್ಷಣೆಯಿರಲಿಲ್ಲ. ಮುಪ್ಪಿನ ಕಾಲದಲ್ಲಿ ಆಕೆ ಜೋಗತಿಯಾಗಿ ಬೀದಿಯಲ್ಲಿ ಬಿಕ್ಕೆ ಬೇಡುತ್ತ ಆಕೆ ಸತ್ತು ಹೋದಳು; ಬೇರೆ 'ಪಾರ್ಸಲಿ'ನಲ್ಲಿ ಇವರೊಂದಿಗೆ ಎರಡು ನೂರು 'ರಸಗುಲ್ಲಾ'ಗಳನ್ನು ಕಳುಹಿದ್ದೇನೆ; ಕೊಚ್ಚಿದ ಮಾಂಸದೊಂದಿಗೆ ತಿಂದರೆ ಅವುಗಳ ರುಚಿ ಹೆಚ್ಚಾಗುವದು.

ಸದಾ ತಮ್ಮ ನಂಬಿಗೆಯ
ಸೇವಕನಾಗಿರುವ
(ಅಂಕಿತ) **ಎಫ್. ಬಿ. ಉಲ್ಲುಸನ್ನ**
ಸಿಲೋರಿಕಾ ಪ್ರಜಾಪ್ರಭುತ್ವದ ರಾಯಭಾರಿ

## ೨

ಕಲಕತ್ತಾ
ಆಗಸ್ಟ ೯, ೧೯೪೩

ಪ್ರಭುಗಳ ಸನ್ನಿಧಿಗೆ—

ತಮ್ಮ ಮರುಚಲ ಮಗಳು—ಸಿಮಾರಾ, ಹಾವಾಡಿಗನ ಪುಂಗಿ ಬೇಕೆಂದು ಕೇಳಿದ್ದಳು; ಇಂದು ಬೀದಿಯಲ್ಲಿ ಒಬ್ಬ ಹಾವಾಡಿಗನನ್ನು ಕಂಡೆ; ಅವನ ಸುಂದರವಾದ ಪುಂಗಿಯನ್ನು ಒಂದು ನೂರು ರೂಪಾಯಿಗಳಿಗೆ ಕೊಂಡಿದ್ದೇನೆ. ಅದು ತುಂಬಾ ಹಗುರಾಗಿದೆ; ಕಲಾಪೂರ್ಣವಾಗಿ ಅದನ್ನು ಸಿದ್ಧಪಡಿಸಿದ್ದಾರೆ; 'ಹಾಲುಗುಂಬಳ'ವೆಂಬ ಹಿಂದುಸ್ತಾನದಲ್ಲಿ ಪಲ್ಲೆಗೆ ಉಪಯೋಗಿಸುವ ಒಂದು ಕಾಯಿಯಿಂದ ತಯಾರಿಸಿದ್ದಾರೆ; ಅದನ್ನು ಪೂರ್ತಿಯಾಗಿ ಕೈಯಿಂದಲೇ ತಯಾರಿಸಿದ್ದಾರೆ; ಮತ್ತೆ ಅದನ್ನು ಮೆರಗುಗೊಳಿಸಿ, ಅದಕ್ಕಾಗಿಯೇ ಅಂದವಾದ 'ತೇಗಿನ' ಕಟ್ಟಿಗೆಯ ಪೆಟ್ಟಿಗೆಯೊಂದನ್ನು ಕೊಂಡು ಆದರಲ್ಲಿ ಅದನ್ನಿರಿಸಿದ್ದೇನೆ. ಪ್ರಭುಗಳ ಅಪ್ಪಣೆಯನ್ನು ಕೋರಿ, ತಮ್ಮ ಮರುಚಲ ಮಗಳು ಸಿಮಾರಳಿಗೆ ಇದನ್ನು ಅರ್ಪಿಸುವ ಸ್ವಾತಂತ್ರ್ಯ ಬಯಸುವ,

ಸದಾ ತಮ್ಮ ನಂಬಿಗೆಯ
ಸೇವಕನಾಗಿರುವ
(ಅಂಕಿತ) **ಎಫ್. ಬಿ. ಉಲ್ಲುಸನ್ನ**
ಸಿಲೋರಿಕಾದ ರಾಯಭಾರಿ

೩

ಆಗಸ್ಟ ೧೦, ೧೯೪೩

ನಮ್ಮ ದೇಶದಲ್ಲಿಯಂತೆ ಕಲಕತ್ತೆಯಲ್ಲಿ 'ಸೀದಾ' ಪದ್ಧತಿ ಇಲ್ಲ: ಆಹಾರ ವಿಷಯದಲ್ಲಿಯಂತೂ ಪ್ರತಿಯೊಬ್ಬನಿಗೆ, ಪೂರ್ತಿ ವೈಯಕ್ತಿಕ ಸ್ವಾತಂತ್ರವಿದೆ. ನಿನ್ನೆ 'ತಿಳ್ಳಿ'ಯ ರಾಯಭಾರಿಯು ನನ್ನನ್ನು ಊಟಕ್ಕೆ ಆಹ್ವಾನಿಸಿದ್ದನು; ಮೇಜಿನಮೇಲೆ ಇಪ್ಪತ್ತಾರು ಬೇರೆ ಬೇರೆ ತೆರನಾದ ಮಾಂಸ ದಿಂದ ತಯಾರಿಸಿದ ಭಕ್ಷ್ಯಗಳಿದ್ದವು; ಅವುಗಳ ಜೊತೆಯಲ್ಲಿ ಬಗೆಬಗೆಯ ಇಪ್ಪತ್ತು ನಾಲ್ಕು ತರಹದ ಪಲ್ಲೆಯ ಪ್ಲೇಟುಗಳೂ, ಕೋಸಂಬರಿ, ಚಟ್ನಿಗಳ ತಟ್ಟೆ ಗಳೂ ಇದ್ದವು; ಶೆರೆಯು ಅತ್ಯುತ್ತಮವಾಗಿತ್ತು. ನಮ್ಮ ದೇಶದಲ್ಲಿ ಉಳ್ಳೇಗಡ್ಡಿ ಗಜ್ಜರಿಗಳಿಗೂ ಸೀದಾ ಇರುವಾಗ ಕಲಕತ್ತೆಯಲ್ಲಿ ಯಾವ ಪದಾರ್ಥಕ್ಕೂ ಸೀದಾ ಇರುವದಿಲ್ಲ; ಈ ವಿಷಯದಲ್ಲಿ ಇಲ್ಲಿಯ ಜನರು ಭಾಗ್ಯಶಾಲಿಗಳು.

ಈ ಸಮಾರಂಭಕ್ಕೆ ಒಬ್ಬ ಭಾರತೀಯ ಯಂತ್ರಜ್ಞ (Engineer) ಬಂದಿದ್ದನು. ಅವನು ನಮ್ಮ ದೇಶದಲ್ಲಿಯೇ ಶಿಕ್ಷಣ ಪಡೆದಿದ್ದಾನಂತೆ. ಮಾತನಾಡುವಾಗ್ಗೆ ಕಲಕತ್ತೆಯಲ್ಲಿ ಬರಗಾಲವಿದೆಯೆಂದು ಹೇಳಿದನು. ಅದನ್ನು ಕೇಳಿ 'ತಿಳ್ಳಿ'ಯ ರಾಯಭಾರಿಯು ಗಟ್ಟಿಯಾಗಿ ನಕ್ಕುಬಿಟ್ಟನು. ನಾನೂ ನಕ್ಕೆನು; ನಿಜವಾಗಿಯೂ ಇಂಥ ಸುಶಿಕ್ಷಿತರಾದ ಭಾರತೀಯರು ಅಜ್ಞಾನಿ ಗಳಾಗಿದ್ದಾರೆ, ಪುಸ್ತಕದಲ್ಲಿಯ ಸುಶಿಕ್ಷಿತರಾದ ಭಾರತೀಯರು ಅಜ್ಞಾನಿಗಳಾ ಗಿದ್ದಾರೆ; ಪುಸ್ತಕದಲ್ಲಿಯ ಜ್ಞಾನವನ್ನಷ್ಟು ಬಿಟ್ಟರೆ ತಮ್ಮ ದೇಶದಲ್ಲಿ ನಡೆದು ದರ ಸ್ಪಷ್ಟ ಜ್ಞಾನವೇ ಅವರಿಗಿರುವದಿಲ್ಲ. ಹಿಂದುಸ್ತಾನದಲ್ಲಿ ಒಟ್ಟು ಜನ ಸಂಖ್ಯೆಯ ಎರಡುಮೂರಾಂಶ ಜನರು ಸದಾ, ಕಾಳುಗಳನ್ನು ಬೆಳೆಯಿಸು ವದರಲ್ಲಿಯೂ, ಮಕ್ಕಳನ್ನು ಹುಟ್ಟಿಸುವದರಲ್ಲಿಯೂ ನಿರತರಾಗಿದ್ದಾರೆ. ಯುದ್ಧ ಪ್ರಾರಂಭವಾಗುವ ಮೊದಲು ಇಲ್ಲಿಂದ ಎಷ್ಟೋ ಆಹಾರ ಪದಾರ್ಥಗಳನ್ನು ಹೊರಗೆ ಕಳುಹಿಸಿಕೊಡುತ್ತಿದ್ದರಂತೆ. ಅದರಂತೆಯೇ, ಮಕ್ಕಳು ದೊಡ್ಡವ ರಾದೊಡನೆ ಅವರನ್ನು ಕೂಲೀ ಕೆಲಸಕ್ಕೆ ದಕ್ಷಿಣ ಆಫ್ರಿಕೆಗೆ ಕಳುಹಿಸಿ ಕೊಡ ತ್ತಿದ್ದರು. ಹಿಂದಿನಿಂದ ಹೀಗೆ ಕೂಲಿಗಳನ್ನು ಕಳುಹಿಸುವದನ್ನು ನಿಲ್ಲಿಸಿ, ಹಿಂದುಸ್ತಾನದ ಪ್ರಾಂತಗಳಿಗೆ ಗೃಹ ಆಡಳಿತೆಯನ್ನು ಕೊಡಲಾಯಿತು.

ನನಗಂತೂ ಈ ಹಿಂದೀಯ ಯಂತ್ರಜ್ಞನು ಭೀಕರ ಅಲ್ಲೋಲ ಕಲ್ಲೋಲ ವೆಬ್ಬಿಸುವ ಮನುಷ್ಯನಂತೆ ತೋರುತ್ತಾನೆ. ಅವನು ಹೋದನಂತರ 'ತಿಳ್ಳಿ' ದರಬ್ಬಾರದ ರಾಯಭಾರಿಯಾದ ಎಮ್. ಝಾನಝಾನ ಟ್ರೂಪನೊಂದಿಗೆ ಅವನ ಬಗೆಗೆ ಚರ್ಚಿಸಿದೆ. ಬಹಳ ಸಮಯ ವಿಚಾರಿಸಿ ಹಿಂದೀಯರು ತಮ್ಮ ದೇಶವನ್ನೂ ಆಳಲು ಅಸಮರ್ಥರಾಗಿದ್ದಾರೆಂಬ ನಿರ್ಣಯವನ್ನು ಕೊಟ್ಟನು. ಎಮ್. ಝಾನಝಾನ ಟ್ರೂಪನಿಗೆ ಅಂತರರಾಷ್ಟ್ರೀಯ ರಾಜಕಾರಣದಲ್ಲಿ ಒಂದು ಮಹತ್ವದ ಸ್ಥಾನವಿದೆ; ಆದುದರಿಂದ ಅವನ ಮಾತಿಗೆ ನಾನು ತುಂಬಾ ಮಹತ್ವ ಕೊಟ್ಟಿದ್ದೇನೆ.

ನಿಮ್ಮ ಆಜ್ಞಾಧಾರಕ

(ಅಂಕಿತ) **ಎಫ್. ಬಿ. ಉಲ್ಲುಸನ್ನ**

೪

೧೧ ಅಗಸ್ಟ ೧೯೪೩

ಈ ದಿನ ಬೆಳಿಗ್ಗೆ ಬೋಲಪುರದಿಂದ ಮರಳಿ ಬಂದೆನು; ಅಲ್ಲಿ ಡಾ. ಟಾಗೋರರ ಶಾಂತಿನಿಕೇತನವನ್ನು ಕಂಡೆನು; ಅದಕ್ಕೆ ಇಲ್ಲಿಯವರು ವಿಶ್ವ-ವಿದ್ಯಾಲಯವೆಂದು ಕರೆಯುತ್ತಾರೆ. ಅಲ್ಲಿ ಒಂದು ಬೆಂಚೂ ಕೂಡ ಇಲ್ಲವೆಂದು ಹೇಳಿದರೆ ಅಲ್ಲಿ ದೊರೆಯುವ ಶಿಕ್ಷಣದ ಕಲ್ಪನೆ ಬರಬಹುದು; ಆಧ್ಯಾಪಕರೂ, ಶಿಕ್ಷಕರೂ ಯಾವ ಭೇದ ಭಾವನೆಗಳಿಲ್ಲದೆ ಗಿಡಗಳ ತಾವಿನಲ್ಲಿ ನೆಲದ ಮೇಲೆ ಕೂಡುತ್ತಾರೆ; ಅವರು ಅಭ್ಯಾಸ ಮಾಡುತ್ತಾರೋ ಇಲ್ಲವೆ ತೂಗಡಿಸುತ್ತಾ-ರೆಯೋ ನನಗಂತೂ ಸೋಜಿಗವಾಗಿದೆ; ಅಲ್ಲಿ ನಾನು ಬಹಳ ಸಮಯ ನಿಲ್ಲಲಿಲ್ಲ; ಅಲ್ಲಿ ಸೆಕೆಯೆನಿಸಹತ್ತಿತು. ಮೇಲೆ ಗಿಡಗಳಲ್ಲಿ ಗುಬ್ಬಿಗಳು ಅಸಹ್ಯವಾಗಿ ಗಿಲಿ-ಬಿಲಿ ಸದ್ದು ಮಾಡುತ್ತಿದ್ದವು.

**ಎಫ್. ಬಿ. ಯು.**

೫

**ಅಗಸ್ಟ ೧೨, ೧೯೪೩**

ಇಂದು ಚೀನಾದೇಶದ ರಾಯಭಾರಿಯ ಕಚೇರಿಗೆ ಹೋಗಿದ್ದೆ. ಅಲ್ಲಿ ಮತ್ತೆ ಒಬ್ಬನು ಬರಗಾಲದ ವಿಷಯವಾಗಿ ಮಾತೆತ್ತಿದನು. ಆದರೆ ನನಗೆ

ಅದು ಪೂರ್ತಿಸತ್ಯವೆಂಬುದರ ಬಗೆಗೆ ಇನ್ನೂ ಪ್ರತ್ಯಕ್ಷ ಪುರಾವೆಗಳು ದೊರೆತಿಲ್ಲ; ನಾವೆಲ್ಲ, ಈ ವಿಷಯದಲ್ಲಿ ಬಂಗಾಲ ಸರಕಾರವು ಹೊರಡಿಸುವ ಪ್ರಕಟನೆಯ ಮಾರ್ಗ ನಿರೀಕ್ಷಿಸುತ್ತಲಿದ್ದೇವೆ. ಪ್ರಕಟನೆಯು ಹೊರಟೊಡನೆಯೇ ಪ್ರಭುಗಳಿಗೆ ತಿಳಿಹಿಸುವೆ

ರಾಜಕಾರಣಕ್ಕೆ ಸಂಬಂಧಿಸಿದ ಪೆಟ್ಟಿಗೆಯಲ್ಲಿಯೇ ಪ್ರಭುಗಳ ಮರಚಲ ಮಗಳು ಸಿವಾರಳಿಗೆ ಒಂದು ಜತೆ ಚಪ್ಪಲಿಗಳನ್ನೂ ಕಳುಹಿಸಿದ್ದೇನೆ ಈ ಚಪ್ಪಲಿಗಳನ್ನು ಹಸಿರುಹಾವಿನ (ಚಿಣಗಿ ಹಾವು) ಚರ್ಮದಿಂದ ತಯಾರಿಸಿದ್ದಾರೆ; ಬ್ರಹ್ಮದೇಶದಲ್ಲಿ ಈ ಹಾವುಗಳು ಬಹಳ; ಬ್ರಿಟಿಷರು ಬ್ರಹ್ಮದೇಶವನ್ನು ಮರಳಿ ಗೆದ್ದನಂತರ ಈ ಚಪ್ಪಲಿಗಳ ವ್ಯಾಪಾರ ಭರದಿಂದ ಸಾಗುವದೆಂದು ಆಶಿಸಲಾಗಿದೆ.

ಎಫ್. ಬಿ ಯು.

೬

ಅಗಷ್ಟ ೧೩, ೧೯೪೩

ನಮ್ಮ ಕಚೇರಿಯ ಪಕ್ಕದಲ್ಲಿಯೇ ಇಬ್ಬರು ಹೆಂಗಸರು ಸತ್ತು ಬಿದ್ದಿದ್ದರು; ಅವರ ದೇಹಗಳಲ್ಲಿ ಉಳಿದವುಗಳೆಂದರೆ ಎಲುವಿನ ಹಂದರಗಳು ಮಾತ್ರ! ಮುರುಟು ರೋಗದಿಂದ ಸತ್ತಿರಬೇಕೆಂದೆನಿಸಿತು; ಬಂಗಾಲಲ್ಲಿ—ಅಷ್ಟೇ ಏಕೆ ಇಡೀಯ ಹಿಂದುಸ್ತಾನದಲ್ಲಿ ಈ ಸುಂಕುರೋಗವು ಭರದಿಂದ ಹಬ್ಬುತ್ತ ನಡೆದಿದೆ; ಇದೊಂದು ವಿಲಕ್ಷಣವಾದ ಭಯಂಕರ ಬೇನೆಯು; ಇದರ ಸೆಳವಿಗೆ ಸಿಕ್ಕವರು ಸೊರಗಿ ಸತ್ತು ಹೋಗುತ್ತಾರೆ; ಇಲ್ಲಿಯ ತನಕ ಈ ಬೇನೆಗೆ ಔಷಧವನ್ನೇ ಯಾರೂ ಕಂಡುಹಿಡಿದಿಲ್ಲ; 'ಕ್ವಿನಿನ್ನ' ಪುಕ್ಕಟೆ ಹಂಚಿದ್ದಾರೆ: ಆದರೆ ಅದರ ಉಪಯೋಗವಾಗಲಿಲ್ಲ; ಈ ಪೌರ್ವಾತ್ಯ ಉಷ್ಣತೆಯ ರೋಗಗಳು ಪಾಶ್ಚಿಮಾತ್ಯರಾದ ನಮ್ಮ ರೋಗಗಳಿಗಿಂತ ಭಿನ್ನವಾಗಿವೆ; ಇದೊಂದು ಸಂಗತಿಯಿಂದಲೇ ಪೂರ್ವ ಪಶ್ಚಿಮ ದೇಶಗಳಲ್ಲಿ ಸಾಮಾನ್ಯವಾದುದೇನು ಇಲ್ಲವೆಂದು ಸಿದ್ಧವಾಗುತ್ತದೆ.

ಪ್ರಭುಗಳ ಹೆಂಡಂದಿರ ಅರವತ್ತನೆಯ ಹುಟ್ಟುಹಬ್ಬದ ಸುಖ-ಸಮಾರಂಭಕ್ಕೆಂದು ಬುದ್ಧನ ಹಾಲುಗಲ್ಲಿನ ಮೂರುತಿಯನ್ನು ಕಳುಹಿದ್ದೇನೆ; ಇದನ್ನು

ಬರೀಯ ಎರಡೇ ಸಾವಿರ ರೂಪಾಯಿಗಳಿಗೆ ಕೊಂಡಿದ್ದೇನೆ; ಇದು ಬಿಂದು-ಸಾರನ ಕಾಲದ್ದಂತೆ; ಕಾಶಿಯ ಪವಿತ್ರ ಅರಸುಮನೆತನದವರೊಬ್ಬರಲ್ಲಿ ಸಿಕ್ಕಿತು; ಆಗಿನಿಂದ ಈಗಿನ ತನಕ ಕಾಯ್ದುಕೊಂಡು ಬಂದಿದ್ದಾರೆ. ಪ್ರಭುಗಳ ಸ್ವಾಗತ ಬಯಸುವ ಕೋಣೆಯಲ್ಲಿ ಇದೊಂದು ಮನಸೆಳೆಯುವ ವಸ್ತುವಾಗುವದೆಂದು ಆಶಿಸುತ್ತೇನೆ.

ತಮ್ಮ ಆಜ್ಞಾಧಾರಕ
ಸೇವಕ
**ಎಫ್. ಬಿ. ಉಲ್ಲಾಸನ್ನ.**

ಮ. ವಾ.

ನಮ್ಮ ಕಚೇರಿಯ ಹೊರಬದಿಯಲ್ಲಿ ಸತ್ತುಬಿದ್ದ ಎರಡು ದೇಹಗಳೊಂದಿಗೆ ಒಂದು ಕೂಸೂ ಇತ್ತು; ಅದು ಸತ್ತುಬಿದ್ದ ತನ್ನ ತಾಯಿಯ ಒಣ ಮೊಲೆಯನ್ನು ಚೀಪಲು ಯತ್ನಿಸುತ್ತಿತ್ತು; ಅದನ್ನು ಆಸ್ಪತ್ರೆಗೆ ಕಳುಹಿಸಿದೆನು.

೭

ಅಗಸ್ಟ ೧೪, ೧೯೪೩

ದಿಕ್ಕಿಲ್ಲದ ಕೂಸನ್ನು ತಮ್ಮ ಆಸ್ಪತ್ರೆಯಲ್ಲಿ ಸೇರಿಸಿಕೊಳ್ಳಲು ಡಾಕ್ಟರರು ಒಪ್ಪಲಿಲ್ಲ; ಆದುದರಿಂದ ಆ ಕೂಸು ಇನ್ನೂ ನಮ್ಮಲ್ಲಿಯೇ ಇದೆ; ಏನು ಮಾಡಬೇಕೆಂಬುದೇ ನನಗೆ ತಿಳಿಯದಾಗಿದೆ. ಪ್ರಭುಗಳ ಸಲಹೆಗಾಗಿ ಕಾದಿದ್ದೇನೆ. ತಿಳ್ಳಿ ರಾಯಭಾರಿಯು ಆ ಕೂಸನ್ನು ಮೊದಲಿನ ಸ್ಥಳದಲ್ಲಿಯೇ ಬಿಟ್ಟುಬಿಡಲು ಸಲಹೆ ಕೊಟ್ಟನು. ಆದರೆ ನಮ್ಮ ಸರಕಾರದ ಮೇಲಧಿಕಾರಿಗಳನ್ನು ವಿಚಾರಿಸದೆ, ರಾಜಕಾರಣಕ್ಕೆ ಸಂಬಂಧಪಟ್ಟ ವಿಷಯದ ಬಗ್ಗೆ ಯಾವ ನಿರ್ಣಯವನ್ನೂ ಕೊಡುವದು ಒಳ್ಳೇದಲ್ಲವೆಂದು ನನಗೆನ್ನಿಸುತ್ತದೆ.

**ಎಫ್. ಬಿ. ಉಲ್ಲಾಸನ್ನ**

೮

ಅಗಸ್ಟ ೧೬, ೧೯೪೩

ನಮ್ಮ ದರಬಾರದ ಹೊರಬದಿಯಲ್ಲಿ ಹೆಣಗಳು ಬೀಳಲಿಕ್ಕೆ ಹತ್ತಿವೆ-ಅವರೆಲ್ಲರು ಆ ಸಟಬೇನೆಗೇಸೆ ತುತ್ತಾಗಿರಬೇಕೆನ್ನಿಸುತ್ತದೆ. ಹಿಂದಿನ ಓಲೆಗಳಲ್ಲಿ ಆ ಬೇನೆಯ ಬಗೆಗೆ ಆಗಲೇ ಬರೆದಿದ್ದೇನೆ.

ಸದ್ದಿಲ್ಲದೆ ಹೋಗಿ ಆ ಕೂಸನ್ನು ಆ ಹೆಣಗಳ ಮಧ್ಯದಲ್ಲಿಟ್ಟು ಪೋಲಿಸರಿಗೆ ದರಬಾರದ ನೆರೆಯಲ್ಲಿರುವ ಹೆಣಗಳನ್ನೆಲ್ಲ ಆದಷ್ಟು ಬೇಗನೆ ತಕ್ಕೊಂಡು ಹೋಗಬೇಕೆಂದು ‘ ಫೋನಿ ’ನಿಂದ ತಿಳಿಸಿದ್ದೇನೆ. ಬಹಳವಾಡಿ, ಈ ಸಂಜೆಯೊಳಗಾಗಿ ಹೆಣಗಳೆಲ್ಲವನ್ನು ತಕ್ಕೊಂಡು ಹೋಗಬಹುದು.

**ಎಫ್. ಬಿ. ಉಲ್ಲುಸನ್ನ**

೯

ಅಗಸ್ಟ ೧೭, ೧೯೪೩

ಇಲ್ಲಿಯ ಇಂಗ್ಲೀಷ ದಿನಪತ್ರಿಕೆಯಾದ ‘ ದಿ ಸ್ಟೇಟ್ಸಮನ್ನ ’ ಅಗ್ರಲೇಖನ ಬರೆದು ಕಲಕತ್ತೆಯಲ್ಲಿ ಉಗ್ರ ಬರಗಾಲವಿದೆಯೆಂದು ಸಾರಿರುತ್ತದೆ; ಕೆಲವು ದಿನ ಈ ಪತ್ರಿಕೆ ಬರಗಾಲದ ಬವಣೆಗೆ ತುತ್ತಾದ ಅದೆಷ್ಟೋ ನಿರ್ಭಾಗ್ಯರ ಚಿತ್ರಗಳನ್ನು ಪ್ರಕಟಿಸಿತು; ಆದರೂ ಆ ಚಿತ್ರಗಳು ವಾಸ್ತವಾದವೊ ಇಲ್ಲವೆ ಕಾಲ್ಪನಿಕವಾದವುಗಳೊ ನನಗಂತೂ ನಂಬಲು ಸರಿಯಾದ ಪುರಾವೆಗಳಿಲ್ಲ; ಮೇಲಾಗಿ ಅವು ಹಿಂದಿನ ಪತ್ರದಲ್ಲಿ ನಾನು ಬರೆದ ಸೆಟಿಬೇನೆಯಿಂದ ಮಡಿದವರ ಚಿತ್ರಗಳಾಗಿರಬೇಕು

ಯಾವ ವಿದೇಶಿಯ ರಾಯಭಾರಿಯೂ ಇನ್ನೂ ಪ್ರಕಟಣೆ ಹೊರಡಿಸಿಲ್ಲ.

೧೦

ಆಗಸ್ಟ ೨೦, ೧೯೪೩

ಸರಕಾರವು ಕೊನೆಗೊಮ್ಮೆ ಸೆಟಿಬೇನೆಯಿಂದ ಬಳಲುವ ಜನರನ್ನು ಆಸ್ಪತ್ರೆಗಳಿಗೆ ಸೇರಿಸಲು ಅನುಮತಿ ಕೊಟ್ಟಿರುತ್ತದೆ. ಕಲಕತ್ತೆಯೊಂದೇ ನಗರದಲ್ಲಿ ನಿತ್ಯ ಎರಡುನೂರಕ್ಕಿಂತ ಹೆಚ್ಚು ಜನರು ಈ ರೋಗದಿಂದ ಸಾಯುತ್ತಿದ್ದಾರಂತೆ; ಇದೊಂದು ಪ್ರಬಲ ಸೋಂಕುರೋಗವಾಗಿದೆ. ಎಷ್ಟೊಂದು ಕ್ವಿನನ ಕೊಟ್ಟರೂ ಉಪಯೋಗವೇ ಆಗುತ್ತಿಲ್ಲ. ಆದುದರಿಂದ ಡಾಕ್ಟರರಿಗೆ ದಿಗಿಲುಬಿದ್ದಿದೆ. ಅದೆಷ್ಟೋ ಮಿಶ್ರಣ ಪ್ರಯೋಗಿಸಿದ್ದಾರೆ; ಔಡಲ ಎಣ್ಣೆಯಾಯಿತು; ಆಸ್ಪಿರಿನ ಕೊಟ್ಟಿದ್ದಾರೆ—ಹೆಚ್ಚೇಕೆ, ಬ್ರಿಟಿಷ ಫಾರ್ಮಸಿ-

ಯಲ್ಲಿ ಸಿದ್ಧಪಡಿಸಿದ ಔಷಧಗಳೆಲ್ಲವನ್ನು ಉಪಯೋಗಿಸಿದ್ದಾರಂತೆ. ಆದರೂ ಪರಿಸ್ಥಿತಿ ಹಿಡಿತದಲ್ಲಿ ಬರಲೊಲ್ಲದು. ಎಷ್ಟೋ ರೋಗಿಗಳ ರಕ್ತವನ್ನು ಪರೀಕ್ಷಣೆಗಾಗಿ ಪಾಶ್ಚಿಮಾತ್ಯ ವಿಜ್ಞಾನಿಗಳ ಕಡೆಗೆ ಕಳುಹಿಸಿದ್ದಾರೆ. ಅಂತೆಯೇ ತಾವೂ ಕೂಡ ಒಬ್ಬ ತಜ್ಞನನ್ನು ಕಳುಹಿಸಬೇಕು; ಮೇಲಾಗಿ ಒಂದು ರಾಜಕಾರಣಿಗಳ ತಂಡವೊಂದನ್ನು ನಿಯಮಿಸಿ ನಾಲ್ಕಾರು ವರುಷಗಳಲ್ಲಿ ಇದರ ಬಗೆಗೆ ಪರಿಶೋಧನೆ ನಡೆಯಿಸಿ ವರದಿ ಒಪ್ಪಿಸಬೇಕೆಂದು ಆಜ್ಞಾಪಿಸುವದು ಅನಿವಾರ್ಯದ ಮಾತಾಗಿದೆ.

ಸ್ವಲ್ಪದರಲ್ಲಿಯೆ ಹೇಳಬೇಕೆಂದರೆ, ಆ ದುರ್ದೈವಿಗಳನ್ನು ಉಳಿಸಲು ಸಾಧ್ಯವಿದ್ದುದೆಲ್ಲವನ್ನು ಮಾಡಲಾಗಿದೆ; ಮನುಷ್ಯನು ಮಾಡುವದೇನೂ ಉಳಿದಿಲ್ಲ; 'ಸಾವು, ಬಾಳು, ದೇವರ ಕೈಯಲ್ಲಿ' ಎಂದು 'ಬಾಯಬಲ್ಲ'ದಲ್ಲಿ ಹೇಳಿಲ್ಲವೆ?

ಬಂಗಾಲಿಯ ಪತ್ರಿಕೆಗಳೆಲ್ಲವೂ ಇಡೀಯ ಬಂಗಾಲದಲ್ಲೆಲ್ಲ ಬರಗಾಲವೆಂದು ಪದೇಪದೇ ಬೊಬ್ಬೆಯಿಡುತ್ತವೆ. ಪ್ರತಿವಾರ ಸಾಸಿರದಷ್ಟು ಹೊಟ್ಟೆಗಿಲ್ಲದೆ ಸಾಯುತ್ತಾರೆಂದು ಅವರು ಬರೆಯುತ್ತಾರೆ. ನಮ್ಮಲ್ಲಿ ಬಂಗಾಲದವಳೇ ಆದ ಒಬ್ಬ ಒಕ್ಕಲಗಿತ್ತಿಯಿದ್ದಾಳೆ. ವರ್ತಮಾನಕಾರರು ಯಾವಾಗಲೂ ಹೀಗೆಯೇ ಸುಳ್ಳು ಬರೆಯುತ್ತಾರೆಂದು ಆಕೆ ಹೇಳುತ್ತಾಳೆ. ನಮ್ಮ ಅಡಿಗೆಗೆ ಬೇಕಾಗುವ ಸಾಮಾನುಗಳೆಲ್ಲವನ್ನೂ ಆಕೆಯೇ ಪೇಟೆಯಿಂದ ತರುತ್ತಾಳೆ. ಬೆಲೆಗಳು ಬಹಳ ಏರಿವೆ; ಅದನ್ನಂತೂ ತಡೆಯುವದು ಸಾಧ್ಯವಿಲ್ಲ. ಯುದ್ಧವೇ ನಡೆದಿದೆಯೆಂದಮೇಲೆ ಮಾಡುವದೇನು?

## ೧೧

ಆಗಸ್ಟ ೨೫, ೧೯೪೩

ಬರಗಾಲದ ಬಗೆಗೆ ಹೊರಟ ಹಾರಿಕೆ ಸುದ್ದಿಗಳಿಗೆ ಇಲ್ಲಿಯ ರಾಜಕೀಯ ವಾತಾವರಣದಲ್ಲಿ ಸಾಕಷ್ಟು ಪುಷ್ಟಿ ದೊರೆತಿಲ್ಲ; ಹಿಂದೀಯರೇ ಬಹುಸಂಖ್ಯೆಯಲ್ಲಿ ಸಭಾಸದ ಮತ್ತು ಮಂತ್ರಿಗಳಾಗಿರುವ ಬಂಗಾಲದ ಅಸೆಂಬ್ಲಿಯವರು ಕಲಕತ್ತೆಯಲ್ಲಾಗಲೀ, ಇನ್ನುಳಿದ ಬಂಗಾಲದಲ್ಲಿಯ ಬೇರೆ ಜಿಲ್ಹೆಗಳಲ್ಲಿ-

ಯಾಗಲೀ ಬರಗಾಲಿಲ್ಲವೆಂದು ಸಾರಬೇಕೆಂದು ನಿಶ್ಚಯಿಸಿರುತ್ತಾರೆ. ಸದ್ಯದಲ್ಲಿ ಯಾದರೂ ಸೀದಾ ಪದ್ಧತಿ ಬಳಕೆಯಲ್ಲಿಲ್ಲವೆಂದು ಇದರ ಮೇಲಿಂದ ತಿಳಿಯುತ್ತದೆ; ಇಲ್ಲಿ ನೆಲೆಸಿಂತ ವಿದೇಶಿಯ ರಾಯಭಾರಿಗಳೆಲ್ಲರಿಗೂ ಅವರ ಈ ಹೇಳಿಕೆಯು ತುಂಬಾ ಸಂತಸವನ್ನುಂಟುಮಾಡಿದೆ; ಅದಕ್ಕೆ ಕಾರಣವಿಲ್ಲದಿಲ್ಲ; ಒಂದು ವೇಳೆ ಬಂಗಾಲವನ್ನು 'ಬರಗಾಲದ ಪ್ರದೇಶ'ವೆಂದು ಸಾರಿದರೆ ಅಲ್ಲಿ ಒತ್ತಾಯದಿಂದಾದರೂ ಸೀದಾ ಪದ್ಧತಿಯನ್ನು ಹೇರುವರು. ಅದರ ಪರಿಣಾಮ ನಮ್ಮ ಮೇಲಾಗುವ ಸಂಭವವಿದೆ.

ಫ್ರೆಂಚ ರಾಯಭಾರಿಗಳಾದ ಶ್ರೀ. ಜೀನಗಲ್ಲೆಯವರು, ಇಷ್ಟರಲ್ಲಿಯೇ ಹಿಂದುಸ್ತಾನದಲ್ಲಿ ಸೀದಾ ಪದ್ಧತಿಯು ಬಳಕೆಯಲ್ಲಿ ಬರುವ ಭೀತಿಯಿರುವದರಿಂದ, ಮೊದಲೇ ಸೆರೆಯನ್ನು ಸಂಗ್ರಹಿಸಿಡಬೇಕೆಂದು ನಿನ್ನೆ ತಾನೇ ನನಗೆ ಹೇಳಿದರು. ಚಂದ್ರನಗರದಿಂದ ಫ್ರೆಂಚ ಸೆರೆಯನ್ನು ತರಿಸಬೇಕೆಂದಿದ್ದೇನೆ; ಫ್ರೆಂಚ ಹಿಂದುಸ್ತಾನದಲ್ಲಿ ಬಹಳ ಹಳೆಯ ಸಂಗ್ರಹವಿದೆಯೆಂದು ಕೇಳಿದ್ದೇನೆ. ಫ್ರೆಂಚ ರಾಜ್ಯಕ್ರಾಂತಿಗಿಂತಲೂ ಪೂರ್ವದಲ್ಲಿ ಸಿದ್ಧಪಡಿಸಿದ ಸಂಗ್ರಹವೂ ಅಲ್ಲಿರುವದಂತೆ; ಪ್ರಭುಗಳ ಅಪ್ಪಣೆಯಾದರೆ ಮಾದರಿಗಾಗಿ ಕೆಲವು 'ಬಾಟ್ಲ'ಗಳನ್ನು ಸಂತೋಷದಿಂದ ಕಳಹುತ್ತೇನೆ.

**ಎಫ್. ಬಿ. ಯು.**

## ೧೨

ಅಗಸ್ಟ ೨೮, ೧೯೪೩

ನಿನ್ನೆ ಒಂದು ಸೋಜಿಗದ ಸಂಗತಿ ನಡೆಯಿತು ನನ್ನ ಚಿಕ್ಕತಂಗಿ 'ಮೇರಿಯಾ'ಳಿಗೆ 'ನ್ಯೂಬರ್ಝಾರ' ದಿಂದ ಕೆಲವು ಆಟಿಗೆಗಳನ್ನು ಕೊಂಡು ತಂದೆನು. ಅವುಗಳಲ್ಲಿ ಒಂದು ಅಂದವಾದ ಚೀನಿ ಗೊಂಬೆಯೂ ಇದೆ. ಅದರ ಮೇಲೆ ಮೇರಿಯಾಳ ಮಮತೆ ಅಧಿಕ; ಅದರ ಬೆಲೆ ಆರು ರೂಪಾಯಿಗಳು; ಮೇರಿಯಾ ಅದನ್ನು ಕೈಯಲ್ಲಿ ಹಿಡಿದುಕೊಂಡಿದ್ದಳು; ಆಕೆಯ ಇನ್ನೊಂದು ಕೈಯನ್ನು ನಾನು ಹಿಡಿದುಕೊಂಡು, ಆಕೆಯನ್ನು ನಡಿಸುತ್ತ ಅಂಗಡಿಯ ಹೊರಗೆ ಬಂದು, ಮೋಟಾರು ಹತ್ತುವದರಲ್ಲಿದ್ದೆವು. ಆಗ ನಡುವಯಸ್ಸಿನ ಬಂಗಾಲಿ ಹೆಣ್ಣುಮಗಳೊಬ್ಬಳು ನನ್ನ ಸನಿಯಕ್ಕೆ ಬಂದು

ಕೋಟನ್ನು ಜಗ್ಗುತ್ತ ತನ್ನ ನುಡಿಯಲ್ಲಿ ಏನನ್ನೋ ಕೇಳಿದಳು, ಹೊಲಸಾದ ಕೈಯಿಂದ ನನ್ನ ಕೋಟನ್ನು ಎಳೆಯುತ್ತಿದ್ದಳಾಕೆ. ಅಲ್ಲಿಂದ ಕೊಸರಿಕೊಂಡು ನಾನು ಕಾರಿನೊಳಗೆ ಬಂದೆ; ಮೋಟಾರು ನಡೆಯಿಸುವ ಬಂಗಾಲಿಯವನಿಗೆ ಆಕೆಗೆ ಏನು ಬೇಕಾಗಿದೆಯೆಂದು ಕೇಳಲು ಹೇಳಿದೆನು.

ಅವನು ಆ ಬಂಗಾಲಿ ಹೆಣ್ಣುಮಗಳೊಂದಿಗೆ ಮಾತನಾಡಿದನು; ಆಕೆ ಅವನ ಮಾತಿಗೆ ಉತ್ತರಕೊಡುತ್ತ ತನ್ನ ಕಂಕುಳದಲ್ಲಿರುವ ಕೂಸನ್ನು ತೋರಿಸಿದಳು. ಅದು ಮೇರಿಯಾಳನ್ನೇ ದಿಟ್ಟಿಸುತ್ತಿದ್ದ ಚೀನಿ ಬೊಂಬೆಯಂತೆಯೇ ಇತ್ತು. ತಿಳಿವರ್ಣದ ಬಿಳಿಯ ಕಂಗಳ ಆ ಕೂಸು ಅಂದವಾಗಿತ್ತು.

ಬಂಗಾಲಿಯ ಆ ಹೆಣ್ಣುಮಗಳು ಏನನ್ನೋ ತಟ್ಟನೆ ಹೇಳಿದಳು. ಡ್ರಾಯವರನೂ ತಟ್ಟನೆ ಉತ್ತರಕೊಟ್ಟನು.

“ ಆಕೆಗೇನು ಬೇಕಾಗಿದೆ ? ” ನಾನು ಅವನನ್ನು ಕೇಳಿದೆ.

ಡ್ರಾಯವರನು ಕೆಲವು ತಾಮ್ರದ ನಾಣ್ಯಗಳನ್ನು ಆ ಹೆಂಗಸಿನ ಕೈಯಲ್ಲಿಟ್ಟು ಕಾರನ್ನು ಮುಂದೆ ಬಿಟ್ಟನು.

“ ಸಾರ್, ಆಕೆಗೆ ತನ್ನ ಹೆಣ್ಣುಕೂಸನ್ನು ಮಾರಬೇಕಾಗಿದೆಯಂತೆ; ಒಂದೂವರೆ ರೂಪಾಯಿಗೆ ಕೊಡುವಳಂತೆ; ”

“ ಬರಿಯ ಒಂದೂವರೆ ರೂಪಾಯಿಗೆ ? ” ನಾನು ಆಶ್ಚರ್ಯಚಕಿತನಾಗಿ ನುಡಿದೆನು

“ ಅಷ್ಟು ಬೆಲೆಗೆ ಒಂದು ಚೀನಿ ಬೊಂಬೆಯೂ ಬರುವದಿಲ್ಲ ! ”

“ ಈಗಿನ ದಿನಗಳಲ್ಲಿ ಬಂಗಾಲಿಯ ಕೂಸುಗಳು ಅದಕ್ಕೂ ಕಡಿಮೆ ಬೆಲೆಗೆ ಸಿಗುತ್ತವೆ. ”

ಅವನ ಮಾತಿನಿಂದ ನನಗೆ ಸೋಜಿಗವೆನಿಸಿತು; ಮೌನನಾಗಿ ಕುಳಿತೆನು.

ನಂತರ ಅಮೇರಿಕೆಯ ಚರಿತ್ರದ ನೆನಹು ಮೂಡಿತು; ಆಫ್ರಿಕೆಯಿಂದ ‘ ನಿಗ್ರೋ ’ ಜನರನ್ನು ಕೊಂಡುತಂದು ಗುಲಾಮರಂತೆ ಮಾರಿದ ಕಾಲದ ಚಿತ್ರಗಳು ನನ್ನ ಮನಸ್ಸಿನಲ್ಲಿ ಮೂಡಿಸಿಂತವು: ಆಗಿನ ಕಾಲದಲ್ಲಿ ಒಬ್ಬ

ಸಾಮಾನ್ಯ 'ನಿಗ್ರೊ'ನಾದರೂ ಇಪ್ಪತ್ತು, ಮೂವತ್ತು ಡಾಲರುಗಳಿಗಿಂತ ಕಡಿಮೆ ಬೆಲೆಗೆ ಸಿಗಲಿಲ್ಲ. ಆಗ ಅಮೇರಿಕದವರು ಅದೆಂಥ ತಪ್ಪು ಮಾಡಿದರು ? ಆಫ್ರಿಕೆಗೆ ಬದಲು ಹಿಂದುಸ್ಥಾನಕ್ಕೆ ಬಂದಿದ್ದರೆ ಗುಲಾಮರು ತೀರ ಕಡಿಮೆ ಬೆಲೆಗೆ ಸಿಕ್ಕಬಹುದಾಗಿತ್ತು! ಹಿಂದೀಯರನ್ನೇ ಕೊಂಡಿದ್ದರೆ ಲಕ್ಷಾವಧಿ ಡಾಲರುಗಳು ಉಳಿಯುತ್ತಿದ್ದವು. ಅರ್ಧ ಡಾಲರಿಗೆ ಒಂದು ಹಿಂದೀಯ ಹುಡಿಗೆ! ಹಿಂದುಸ್ಥಾನದ ಜನಸಂಖ್ಯೆ ನಾಲ್ವತ್ತು ಕೋಟಿ! ಅಂದರೆ ಅವರೆಲ್ಲರನ್ನೂ ಅಮೇರಿಕೆಯು ಮನಸ್ಸು ಮಾಡಿದರೆ ಇಪ್ಪತ್ತು ಕೋಟಿ ಡಾಲರುಗಳಿಗೆ ಕೊಳ್ಳಬಹುದು; ಇದರ ಬಗೆಗೆ ವಿಚಾರಿಸಿರಿ! ಮೇಲಾಗಿ ಇಪ್ಪತ್ತು ಕೋಟಿಗಳಿಗಿಂತ ಹೆಚ್ಚು ಡಾಲರುಗಳನ್ನು ನಮ್ಮ ದೇಶದಲ್ಲಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕಾಗಿ ವೆಚ್ಚ ಮಾಡುತ್ತೇವೆ.

'ಸೋನಾಗಚಿ'ಯಲ್ಲಿರುವರೆಲ್ಲ ವೇಶ್ಯೆಯರಂತೆ: ನಮ್ಮ ಡ್ರಾಯವರನು ಹೇಳಿದನು. ಅದೊಂದು ಗುಲಾಮ ಸಂತತಿಯಂತೆ! ನೂರಾರು ಹುಡಿಗೆಯರನ್ನು ತಂದು ನಿತ್ಯ ಮಾರಾಟ ಮಾಡುತ್ತಾರಂತೆ; ತಾಯಿತಂದೆಗಳೇ ಮಾರುತ್ತಾರೆ; ಸೂಳೆಯರು ಕೊಳ್ಳುತ್ತಾರೆ. ಸರ್ವಸಾಧಾರಣ ಒಂದು ಹುಡಿಗೆಯ ಬೆಲೆ ಒಂದೂಕಾಲು ರೂಪಾಯಿ! ಆದರೆ ಹುಡಿಗೆಯು ಅಂದವಾಗಿದ್ದರೆ ನಾಲ್ಕು, ಐದು, ಇಲ್ಲವೆ ಹತ್ತು ರೂಪಾಯಿಗಳತನಕವೂ ಆಕೆಗೆ ಬೆಲೆ ಬರುತ್ತದೆ. ಒಂದು ಪೌಂಡ ಅಕ್ಕಿಗೆ ಒಂದು ರೂಪಾಯಿ ಬೆಲೆ; ಒಂದು ಮನೆಯವರು ಎರಡು ಹುಡಿಗೆಯರನ್ನು ಮಾರಿ ಒಂದೆರಡು ವಾರಗಳಿಗೆ ಗಂಜಿಗಾಗುವಷ್ಟು ಅಕ್ಕಿ ದೊರಕಿಸುವರು; ಪ್ರತಿಯೊಬ್ಬ ಬಂಗಾಲಿಗಳ ಮನೆಯಲ್ಲಿ ಎರಡಕ್ಕಿಂತ ಹೆಚ್ಚು ಹುಡಿಗೆಯರಿರುತ್ತಾರೆ.

ನಾಳೆ ಕಲಕತ್ತೆಯ 'ಮೇಯರ'ನು ನಮ್ಮನ್ನು ಊಟಕ್ಕೆ ಕರೆದಿದ್ದಾನೆ. ದ್ದಾನೆ; ಅಲ್ಲಿ ತೆರತೆರನಾದ ವಿಷಯಗಳ ಬಗೆಗೆ ಮಾತುಕತೆಗಳು ನಡೆಯುವದು ಖಂಡಿತ !

**ಎಫ್. ಬಿ. ಯು.**

೧೩

ಆಗಸ್ಟ ೨೫, ೧೯೪೩

ಮೇಯರನು ಕಲಕತ್ತೆ ನಗರದಲ್ಲಿ ಬರಗಾಲವಿದೆಯೆಂದು ಹೇಳುತ್ತಾನೆ. ಪರಿಸ್ಥಿತಿ ದಿನದಿನಕ್ಕೆ ಗಂಭೀರವಾಗುತ್ತ ನಡೆದಿದೆ. ನಮ್ಮ ಸರಕಾರ ಹಿಂದು-

ಸ್ಥಾನಕ್ಕೆ ಪರಿಹಾರದ್ರವ್ಯ ಕೊಡಬೇಕೆಂದು ಅವನು ಕೇಳಿಕೊಂಡಿದ್ದಾನೆ; ನಾನೂ ಸರಕಾರದ ಪರವಾಗಿ ಸಹಾನುಭೂತಿ ವ್ಯಕ್ತಮಾಡಿದೆ; ಅದರೊಂದಿಗೇನೇ ಬಿಚ್ಚುಮಾತಿನಲ್ಲಿ ಹೇಳಿಬಿಟ್ಟಿದ್ದೇನೆ. 'ಬರಗಾಲವು ಹಿಂದುಸ್ತಾನದ ಅಂತುಕ ಸಮಸ್ಯೆಯಾಗಿದೆ; ನಮ್ಮ ಸರಕಾರವು ಪರಕೀಯರ ಅಂತರಿಕ ವಿಷಯಗಳಲ್ಲಿ ಕೈಹಾಕುವದಿಲ್ಲ' ವೆಂದು ಹೇಳಿಬಿಟ್ಟಿದ್ದೇನೆ. ನಾವು ನಿಜವಾದ ಪ್ರಜಾಪ್ರಭುತ್ವವಾದಿಗಳು; ಬದುಕುವದಕ್ಕೂ ಸಾಯುವದಕ್ಕೂ ಭಾರತೀಯರಿಗೆ ಸ್ವಾತಂತ್ರ್ಯ ಪೂರ್ತಿಯದೆ; ಅದರಲ್ಲಿ ನಾವು ಕೈಹಾಕುವದಿಲ್ಲ. ಇದು ವೈಯಕ್ತಿಕ ಪ್ರಶ್ನೆ; ಬಹಳವಾದರೆ ರಾಷ್ಟ್ರೀಯ ಪ್ರಶ್ನೆ; ಅಂತರರಾಷ್ಟ್ರೀಯ ಸಮಸ್ಯೆಯಲ್ಲ. ಎಮ್. ಝೂನಝೂನ ಟ್ರೊಪನೂ ಅತ್ಯುತ್ಸಾಹದಿಂದ ನನ್ನ ಮಾತಿಗೇನೆ ಬೆಂಬಲ ಕೊಟ್ಟಿದ್ದಾನೆ. "ನಿಮ್ಮ ಅಸೆಂಬ್ಲಿಯವರೇ ಬಂಗಾಲವನ್ನು ಬರಗಾಲದ ಪ್ರದೇಶವೆಂದು ಸಾರಿಲ್ಲ; ಅಂದಮೇಲೆ ವಿದೇಶಿಯರ ನೆರವೇಕೆ ನಿಮಗೆ ಬೇಕು ?" ಎಂದು ಮೇಯರರನ್ನು ಸವಾಲಿಟ್ಟರು. ಇದನ್ನು ಕೇಳಿ ಮೇಯರರು ಸುಮ್ಮನಾಗಿ 'ರಸಗುಲ್ಲಾ' ತಿನ್ನಲಿಕ್ಕೆ ಪ್ರಾರಂಭಿಸಿದರು.

**ಎಫ್. ಬಿ. ಯು.**

## ೧೪

ಅಗಸ್ಟ ೩೦, ೧೯೪೩

ಭಾರತ ಮಂತ್ರಿಗಳಾದ ಅಮೇರಿಯವರು ಕಾಮನ್ಸ ಸಭೆಯಿಂದ ಒಂದು ಪ್ರಕಟನೆ ಹೊರಡಿಸಿದ್ದಾರೆ. ಅದರಲ್ಲಿ ಹಿಂದುಸ್ತಾನದ ಜನಸಂಖ್ಯೆಯು, ಅಲ್ಲಿಯ ಆಹಾರ ಉತ್ಪಾದನೆಯನ್ನು ಮೀರಿ ಬೆಳೆದಿದೆಯೆಂದು ಸಾರಿದ್ದಾರೆ. ಜನಸಂಖ್ಯೆಯು ನೂರೈವತ್ತು ಪಟ್ಟು ಏರಿದ್ದರೂ ಭೂಮಿಯ ಉತ್ಪಾದನೆಯು ತೀರ ಸ್ವಲ್ಪ ಪ್ರಮಾಣದಲ್ಲಿ ಹೆಚ್ಚಿದೆ. ಮೇಲಾಗಿ ಭಾರತೀಯರು ಹೆಚ್ಚಾಗಿ ತಿನ್ನುತ್ತಾರೆ.

ಪ್ರಭುಗಳೇ, ಇದು ಸತ್ಯವಾದ ಮಾತು; ನನ್ನ ಲಕ್ಷಕ್ಕೂ ಬಂದಿದೆ. ಹಿಂದೀಯರು ದಿನಕ್ಕೆ ಎರಡೇ ಊಟ—ಹಲವು ಸಲ ಒಂದೇ ಒಂದು ಊಟ—ಉಂಡರೂ ಪಾಶ್ಚಿಮಾತ್ಯರಾದ ನಾವು ನಿತ್ಯ ಐದು ಊಟಗಳಲ್ಲಿ ಕೂಡಿಉಣ್ಣುವದಕ್ಕಿಂತಲೂ ಹೆಚ್ಚಾಗಿ ಉಣ್ಣುತ್ತಾರೆ. ಎಮ್. ಝೂನಝೂನ ಟ್ರೊಪನ ಅಭಿಪ್ರಾಯದಂತೆ ಬಂಗಾಲಿಗಳ ಸಾವು ಇಷ್ಟು ಹೆಚ್ಚಾಗಲಿಕ್ಕೆ ಅವರ ಕೂಳುಬಾಕ ವೃತ್ತಿಯೇ ಮುಖ್ಯ ಕಾರಣವು; ಹಲವು ಸಲ ಅವರು ಮಿತಿಮೀರಿ ತಿನ್ನುತ್ತಾರೆ;

ಆಗ ಹೊಟ್ಟೆಯೊಡೆದುಕೊಂಡು ಸಾಯುತ್ತಾರೆ. ಒಂದು ವೇಳೆ ಹೊಟ್ಟೆಯೊಡೆಯ ಲಿಲ್ಲವೆಂದಿಟ್ಟುಕೊಳ್ಳೋಣ; ಪ್ಲೀಹ ಒಡೆಯುವದು; ಹೆಗ್ಗಣಗಳು ಸಂತಾನ ಬೆಳಿಗೆಯಲ್ಲಿ ಪ್ರಖ್ಯಾತಿಪಡೆದಂತೆ ವಿಶ್ವದಲ್ಲಿ ಭಾರತೀಯರು ಮಕ್ಕಳನ್ನು ಹಡೆಯು ವದರಲ್ಲಿ ಪ್ರಖ್ಯಾತಿಯನ್ನು ಪಡೆದಿದ್ದಾರೆ. ಹಲವು ಸಲ ಹಿಂದುಸ್ತಾನದಲ್ಲಿ ಮನುಷ್ಯರ ಮತ್ತು ಹೆಗ್ಗಣಗಳ ಸಂತಾನಗಳಲ್ಲಿ ಭೇದವನ್ನು ಅರಸುವದು ಕಠಿನ ವಾಗುತ್ತದೆ. ಕೂಸುಗಳು ಹುಟ್ಟಿನಷ್ಟೇ ಅಧಿಕ ಸಂಖ್ಯೆಯಲ್ಲಿ ಸಾಯುತ್ತವೆ. ಹೆಗ್ಗಣಗಳು ಪ್ಲೇಗದಿಂದ ಸತ್ತರೆ ಹಿಂದೀಯರು ಸೆಟಿಬೇನೆಯಿಂದ ಸಾಯುವರು: ಎಷ್ಟೋ ಸಲ ಅವರಿಗೂ ಪ್ಲೇಗ ಬರುವದು; ಆದರಿಂದಂತೂ ಬದುಕುವದೆ ಇಲ್ಲ; ಹೇಗೂ ಹೆಗ್ಗಣಗಳು ತಮ್ಮ ತಮ್ಮ ಬಿಲಗಳಲ್ಲಿ ಬಿದ್ದುಕೊಂಡಿವೆ; ವಿಶ್ವಶಾಂತಿ ಯನ್ನು ಭಂಗಗೊಳಿಸಲು ಅವು ಹೊರಗೆ ಬರುತ್ತಿಲ್ಲ; ಅಂದಮೇಲೆ ಅವುಗಳ ಅಂತರಿಕ ವಿಷಯುಗಳಲ್ಲಿ ಕೈಹಾಕುವದು ನಮ್ಮ ಕರ್ತವ್ಯವಲ್ಲ.

ಹಿಂದೀ ಸರಕಾರದ ಆಹಾರ ಮಂತ್ರಿಯು ಸ್ಥಾನಿಕ ಪರಿಸ್ಥಿತಿಯನ್ನು ಅಭ್ಯಾಸಿಸಲು ಕಲಕತ್ತೆಗೆ ಬಂದಿದ್ದಾನೆ; ಬಂಗಾಲದಲ್ಲಿ ಬರಗಾಲ ಬಿದ್ದದ್ದೂ, ದಿನದಿನಕ್ಕೆ ಜನಗಳು ಪಟಪಟನೆ ಬಿದ್ದು ಸತ್ತುಹೋಗುವದೂ ಆಹಾರ ಕೊರತೆ ಯಿಂದಲ್ಲದೆ, ಅರಾಜಕತ್ವದಿಂದಲ್ಲವೆಂಬುದು ಮಾನ್ಯ ಮಂತ್ರಿಗಳಿಗೆ ತಾನೇ ವೇದ್ಯವಾಗುವದೆಂದುದು ಬಂಗಾಲಿಗಳು ಆನಂದಭರಿತರಾಗಿದ್ದಾರೆ.

**ಎಫ್. ಬಿ. ಉಲ್ಲುಸನ್ನ**

೧೫

ಸಪ್ಟೆಂಬರ ೨೦, ೧೯೪೩

ಮಾನ್ಯ ಮಂತ್ರಿಗಳು ಮರಳಿ ದಿಲ್ಲಿಗೆ ತೆರಳಿದರು. ಅವರು ತಮ್ಮ ಸೂಚನೆಗಳನ್ನು ವ್ಹಾಯಿಸರಾಯರ ಎದುರಿನಲ್ಲಿಡುವರೆಂದು ನಂಬಲಾಗಿದೆ.

**ಎಫ್. ಬಿ. ಉಲ್ಲುಸನ್ನ**

೧೬

ಸಪ್ಟೆಂಬರ ೨೫, ೧೯೪೩

ಕಲಕತ್ತೆಯ ಬೀದಿಗಳಲ್ಲಿಯೂ, ಕಾಲುಹಾದಿಗಳಲ್ಲಿಯೂ ನಿತ್ಯ ಜನರು ಸಾಯುತ್ತಿದ್ದಾರೆಂದು ಲಂಡನ ಪತ್ರಿಕೆಗಳಲ್ಲಿ ವರದಿಗಳು ಪ್ರಕಟವಾಗುತ್ತಿವೆ.

ಆದರೆ ಅವು ವರ್ತಮಾನ ಪತ್ರದ ವರದಿಗಳು. ಬಂಗಾಲದಲ್ಲಿ ಬರಗಾಲವಿಡೆ-ಯೆಂಬ ಬಗ್ಗೆ ಸರಕಾರವು ಅಧೀಕೃತ ಪ್ರಕಟನೆ ಹೊರಡಿಸಿಲ್ಲ.

ನಿನ್ನೆ ಚೀನದೇಶದ ರಾಯಭಾರಿಯು ಬಂಗಾಲದ ಜನರಿಗಾಗಿ ತನ್ನ ದೇಶದಲ್ಲಿ ಪರಿಹಾರದ್ರವ್ಯವನ್ನು ಕೂಡಿಸಬೇಕೆಂದಿರುವನ್ನು ಹೇಳಿದರು. ಆದರೆ ಆ ಬಗೆಗೆ ಇನ್ನೂ ಯಾವ ನಿರ್ಣಯಕ್ಕೂ ಅವರು ಬಂದಿಲ್ಲ. ಕೆಲವರು ಬರಗಾಲವಿದೆಯೆನ್ನುತ್ತಾರೆ; ಮತ್ತೆ ಕೆಲವರು ಬರಗಾಲವೇ ಇಲ್ಲವೆನ್ನುತ್ತಾರೆ. ನಾನು ಅಂತೆಯೇ ಅವರಿಗೆ ಹೇಳಿದೆ; "ಇನ್ನೂ ಬರಗಾಲವಿದೆಯೆಂಬುದು ನಿಶ್ಚಿತವಾಗಿ ತಿಳಿದಿಲ್ಲ: ಸುಮ್ಮನೆ ಮುರ್ಖರ ಹಾಗೆ ಮಾಡಬೇಡಿರಿ; ಸರಕಾರದವರು ಹೊರಡಿಸಿದ್ದು ಒಂದೇ ಒಂದು ಪ್ರಕಟನೆ; ಅದರಲ್ಲಿ ಭಾರತೀಯರು ಹೆಚ್ಚು ತಿನ್ನುವದರಿಂದ ಆಹಾರಪದಾರ್ಥಗಳ ಕೊರತೆಯಾಗಿರುವದೆಂದು ಹೊರಡಿಸಿದ್ದಾರೆ. ನಾವು ಹೀಗೆಯೇ ಪರಿಹಾರ ದ್ರವ್ಯವನ್ನು ಕೂಡಿಸಿಕೊಟ್ಟರೆ ಅವರ ಕೂಳುಬಾಕತನವನ್ನು ಹೆಚ್ಚಿಸಿದಂತಾಗುತ್ತದೆ. ಇದಕ್ಕಿಂತ ಮೂರ್ಖತನ ಇನ್ನೊಂದಿಲ್ಲ." ನನ್ನ ಬುದ್ಧಿಯ ಮಾತು ಆ ರಾಯಭಾರಿಗಳ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಮಾಡಿದಂತಿಲ್ಲ.

**ಎಫ್. ಬಿ. ಉಲ್ಲುಸನ್ನ**

೧೭

ಸಪ್ಟೆಂಬರ ೨೮, ೧೯೪೩

ಆಹಾರ ಸಮಸ್ಯೆಯನ್ನು ಚರ್ಚಿಸುವದಕ್ಕಾಗಿ ದಿಲ್ಲಿಯಲ್ಲಿ ಒಂದು ಸಭೆಯನ್ನು ಕರೆದಿದ್ದಾರಂತೆ; ಇಂದು ಮತ್ತೆ ಕೆಲವರು ಸೆಟಿಬೇನೆಯಿಂದ ಸತ್ತರು. ಬಂಗಾಲ ಸರಕಾರಗಳನ್ನೊಳಗೊಂಡು, ಎಲ್ಲ ಪ್ರಾಂತಿಕ ಸರಕಾರಗಳು ಆಹಾರ ಹಂಚುವಿಕೆಯ ಪದ್ಧತಿಯೊಂದರಿಂದಲೇ ಲಕ್ಷಾವಧಿ ರೂಪಾಯಿಗಳ ಲಾಭ-ಪಡೆದಿವೆಯೆಂದು ಪ್ರಕಟನೆಗಳನ್ನು ಹೊರಡಿಸಿವೆ.

**ಎಫ್. ಬಿ. ಉಲ್ಲುಸನ್ನ.**

೧೮

ಅಕ್ಟೋಬರ ೨೦, ೧೯೪೩

ನಿನ್ನೆ 'ಗ್ರಾಂಡ ಹೋಟಲಿ'ನಲ್ಲಿ 'ಬಂಗಾಲದ ದಿನ'ವನ್ನು ಆಚರಿಸಿದರು. ಸ್ಥಾನಿಕ ಯುರೋಪಿಯನ್ನ ಸಭ್ಯಗೃಹಸ್ಥರಲ್ಲದೆ, ದೊಡ್ಡದೊಡ್ಡ

ಸರಕಾರೀ ಅಧಿಕಾರಿಗಳೂ, ವ್ಯಾಪಾರಸ್ಥರೂ ಮತ್ತು ನರೇಂದ್ರರೂ ಬಂದಿದ್ದರು. 'ಕಾಕ್‌ಟೇಲಬಾರ' ತುಂಬಿ ಹೋಗಿತ್ತು. ನಾನು ಶ್ರೀಮತಿ ಜ್ಯೂಲಿಯೆಟ ಟ್ರೊಪಳೊಂದಿಗೆ ಎರಡುಸಲ ನೃತ್ಯಮಾಡಿದೆನು; ಆಕೆಯ ಬಾಯಿಂದ ಬಳ್ಳೊಳ್ಳಿಯ ವಾಸನೆಯು ಬರುತ್ತಿತ್ತು. ಈ ಸಮಾರಂಭದಲ್ಲಿ ಒಂಭತ್ತು ಸಾವಿರ ರೂಪಾಯಿಗಳು ಕೂಡಿವೆಯೆಂದು ಆಕೆ ಹೇಳಿದಳು. ಶ್ರೀಮತಿ ಟ್ರೊಪಳು ಸುಂದರಿಯಾಗಿದ್ದಾಳೆ. ದುರ್ದೈವದಿಂದ ಭಾರತದಲ್ಲಿ ಆಕೆ ಬಹಳ ಜನ ಗೆಳೆಯರನ್ನಾಗಿ ಮಾಡಿಕೊಂಡಿದ್ದಾಳೆ. ಅದರಿಂದಾಗಿ ರಾಯಭಾರಿಗಳ ಗುಂಪಿನಲ್ಲಿ ಆಕೆ ಅಷ್ಟೊಂದು ಜನಪ್ರಿಯಳಾಗಿಲ್ಲ. ಹಿಂದೀಯರ ಬಗೆಗೆ ಆಕೆಗಿರುವ ಈ ಒಲವಿನಿಂದಾಗಿಯೇ ಆಕೆಯ ಗಂಡನನ್ನು ಆದಷ್ಟು ತೀವ್ರ ಅವರ ದೇಶದ ಸರಕಾರದವರು ತಿರುಗಿ ಕರೆಯಿಸುವರೆಂದು ನನಗೆ ವಿಶ್ವಸನೀಯವಾಗಿ ತಿಳಿದುಬಂದಿದೆ.

ನೆರೆದ ಹಿಂದೀಯ ಲಲನೆಯರಲ್ಲಿ ಒಬ್ಬಳು ಸುಂದರಳಾದ ಚಿತ್ತಾಕರ್ಷಕ ಕನ್ಯಾರಮಣಿ ಇದ್ದಳು. ಆಕೆಯ ಹೆಸರು ಸ್ನೇಹಲತೆ! ಆಕೆಯ ನೃತ್ಯ ಅದ್ಭುತ ರಮ್ಯವಾಗಿತ್ತು.

**ಎಫ್. ಬಿ. ಉಲ್ಲುಸನ್ನ**

೧೯

ಅಕ್ಟೋಬರ ೨೬, ೧೯೪೩

ಮುಂಬಯಿ ಸರಕಾರದ ಹಿಂದಿನ ಮಂತ್ರಿಗಳು ಅಂಕಿ ಸಂಖ್ಯೆಗಳನ್ನು ಕೊಟ್ಟು, ಲೆಕ್ಕಹಾಕಿ ಬಂಗಾಲದಲ್ಲಿ ಪ್ರತಿವಾರ ಬರಗಾಲದಿಂದ ಸುಮಾರು ಒಂದು ಲಕ್ಷ ಜನರು ಸಾಯುವರೆಂದು ಹೇಳಿದ್ದಾರೆ; ಆದರೆ ಅದು ಸರಕಾರೀ ಪ್ರಕಟನೆಯಲ್ಲ.

ನಮ್ಮ ದರಬಾರದ ಎದುರಿನಲ್ಲಿ ಮತ್ತೆ ಕೆಲವು ಹೆಣಗಳು ಬೀಳುತ್ತಲಿವೆ. ಬಾರಿಸಾಲದಿಂದ ಅನ್ನಾನ್ವೇಷಣೆಗಾಗಿ ಬಂದ ಇಡೀಯ ಒಂದು ಕುಟುಂಬವೇ ಸತ್ತುಬಿದ್ದಿದೆಯೆಂದು ನಮ್ಮ ಡ್ರಾಯವರನು ಹೇಳಿದನು.

ನಿನ್ನೆ ನಾನು ಗಾಯಕನೊಬ್ಬನ ಹೆಣವನ್ನು ನೋಡಿದೆನು. ಅವನ ಒಂದು ಕೈಯಲ್ಲಿ ಸಿತಾರವಿತ್ತು; ಮತ್ತೊಂದು ಕೈಯಲ್ಲಿ ಆಡುವ ಕಟ್ಟಿಗೆಯ

ಗಿಲಗಂಚಿ ಇತ್ತು; ಸಿತಾರ ಮತ್ತು ಗಿಲಗಂಚಿ! ಅವುಗಳೆರಡನ್ನು ಏಕೆ ಹಿಡಿದಿದ್ದನೆಂಬುದು ನನಗೆ ತಿಳಿಯಲಿಲ್ಲ.

ದುರ್ದೈವಿಗಳಾದ ಹೆಗ್ಗಣಗಳು! ಅದೆಷ್ಟು ಶಾಂತರಾಗಿ ಅವರು ಸಾಯುತ್ತಾರಲ್ಲ! ಅವರ ಬಾಯಿಂದ ಒಂದೂ ಮಾತು ಹೊರಡುವದಿಲ್ಲ. ಇಷ್ಟೊಂದು ಸೌಮ್ಯ, ಶಾಂತ ಹೆಗ್ಗಣಗಳನ್ನು ವಿಶ್ವದಲ್ಲಿ ಬೇರೆ ಎಲ್ಲಿಯೂ ನೋಡಿಲ್ಲ; ಶಾಂತತೆಗಾಗಿ ಸಿಕ್ಕುವ ನೋಬಲ್ ಪಾರಿತೋಷಕಕ್ಕೆ ಹಿಂದುಸ್ತಾನವು ಪಾತ್ರವಾಗಿದೆ; ಲಕ್ಷಗಟ್ಟಲೆ ಜನರು, ಒಂದೂ ಎದುರು ಮಾತನಾಡದೆ ಹೊಟ್ಟೆಗಿಲ್ಲದೆ, ಉಪವಾಸಬಿದ್ದು ಸತ್ತುಹೋಗುತ್ತಾರೆ; “ ಅಯ್ಯೋ ದೇವರೆ! ಅನ್ನದಾತಾ!” ಎಂದೆನ್ನುತ್ತಿರುವಂತಿರುವ ಅವರ ನಿರ್ಜೀವ ಕಾಂತಿರಹಿತ ಕಂಗಳು ಆಗಸವನ್ನೇ ದಿಟ್ಟಿಸುತ್ತಿರುತ್ತವೆ.

ಕಳೆದ ರಾತ್ರಿ, ಆ ದರಿದ್ರ ಗಾಯಕನ ನಿರ್ಜೀವ, ಕಠಿನ, ಅಚಲ, ಅಗೋಚರ ಕಂಗಳು ನಿದ್ರೆಯಲ್ಲಿ ನನ್ನೆದುರಿನಲ್ಲಿ ನಿಂತಂತಾಗುತ್ತವೆ.

**ಎಫ್. ಬಿ. ಯು.**

೨೦

ನವ್ಹಂಬರ ೫, ೧೯೪೩

ಹೊಸ ವ್ಹಾಯಿಸರಾಯರು ಬಂದಿದ್ದಾರೆ. ಅವರು ಪರಿಹಾರದ ಕೆಲಸಕ್ಕೆ ಸೈನಿಕರನ್ನು ಕಳುಹಿಸಿದ್ದಾರಂತೆ. ಅಲ್ಲಲ್ಲಿ ಕೇಂದ್ರಗಳನ್ನು ತೆರದಿದ್ದಾರಂತೆ; ಆ ಕೇಂದ್ರಗಳಿಗೆ ಕಲಕತ್ತೆಯ ಬೀದಿಗಳಲ್ಲಿ ಬಿದ್ದು ಸಾಯುವವರನ್ನು ತಂದು ಹಾಕುತ್ತಿದ್ದಾರಂತೆ, ಆ ಕೇಂದ್ರಗಳಲ್ಲಿ ಅವರಿಗೆ ಎಲ್ಲ ತೆರನಾದ ಸೌಕರ್ಯಗಳೂ, ಸುಖಗಳೂ ದೊರೆಯುವಂತೆ ವ್ಯವಸ್ಥೆಯಿದೆ.

ಬಂಗಾಲದಲ್ಲಿ ಪಟಿಬೇನೆಯಿಲ್ಲ; ಬರಗಾಲವಿರುವದೇ ನಿಜವೆಂದು ಈಗ ಎಮ್. ಝೂನರ್ಝೂನ ಟ್ರೊಪನಿಗೆ ಅನಿಸಲಿಕ್ಕೆ ಹತ್ತಿದೆಯಂತೆ. ಈ ಅನಿಸಿಕೆಯು ವಿದೇಶಿಯ ರಾಯಭಾರಿಗಳಲ್ಲಿ ಒಂದು ತೆರನಾದ ಕೋಲಾಹಲವನ್ನೇ ಎಬ್ಬಿಸಿದೆಯಂತೆ; ಯುಬ್ರಾನಿಯಾ, ಪ್ರಿಟಾನಿ, ತಿರಾನಿಕಾಗಳ ರಾಯಭಾರಿಗಳು ಎಮ್. ಝೂನರ್ಝೂನ ಟ್ರೊಪನ ಈ ಹೇಳಿಕೆಯನ್ನು ಮುಂಬರುವ ಯುದ್ಧದ ಗುರುತೆಂದು ಭಾವಿಸಿದ್ದಾರೆ.

ವ್ಹಾಯಿಸರಾಯರು ಕೈಕೊಂಡ ಈ ಕಾರ್ಯದ ತೊಡಕಿನಿಂದ ಹಿಂದುಸ್ತಾನದಲ್ಲಿಯ ಯುರೋಪ ಮತ್ತು ಏಸಿಯಾಗಳ ಆಶ್ರಿತರು ಕಳವಳಗೊಂಡಿದ್ದಾರೆ. ಒಂದು ಸಮಯ ಬಂಗಾಲವನ್ನು ಬರಗಾಲವೆಂದು ಸಾರಿದರೆ, ತಮಗೂ ಮತ್ತು ತಮ್ಮ ಭತ್ತೆಗಳಿಗೂ ಪರಿಣಾಮವಾಗುವದೆಂದು ಅವರು ತಿಳಿದಿದ್ದಾರೆ.

ವ್ಹಾಯಿಸರಾಯರು ಹೊರಡಿಸಿದ ಸರಕಾರೀ ಪ್ರಕಟನೆಯ ಕಡೆಗೆ ಪ್ರಭುಗಳ ಲಕ್ಷವನ್ನು ಎಳೆಯ ಬಯಸುತ್ತೇನೆ ಹಿಂದುಸ್ತಾನದಲ್ಲಿಯ ಯುರೋಪ ದೇಶದ ಆಶ್ರಿತರ ರಕ್ಷಣೆಗೆಂದು ನಾವು ಬಡಿದಾಡಬೇಕಲ್ಲವೆ ? ಪಾಶ್ಚಿಮಾತ್ಯ ಸಂಸ್ಕೃತಿ ಮತ್ತು ನಾಗರಿಕತೆಗಳ ತಳಹದಿಯ ಮೇಲೆಯೇ ನಡೆಯಬೇಕಲ್ಲವೆ ? ಸ್ವತಂತ್ರವಾದ ಪ್ರಜಾಪ್ರಭುತ್ವವನ್ನು ಕಾಯ್ದುಕೊಳ್ಳಲು ಯಾವ ಕಾರ್ಯ ಕೈಕೊಳ್ಳಬೇಕು ?

ಸಲಹೆಗಾಗಿ ಪ್ರಭುಗಳು ಅಪ್ಪಣೆ ಕೊಡಿಸುವದರ ಮಾರ್ಗ ನಿರೀಕ್ಷಿಸುತ್ತಿದ್ದೇನೆ.

ಎಫ್. ಬಿ. ಉಲ್ಲುಸನ್ನ

೨೧

ನವ್ಹಂಬರ ೨೫, ೧೯೪೩

ಎಮ್. ಝೂನಝಾನ ಟ್ರೊಪಸಿಗೆ ಬಂಗಾಲದಲ್ಲಿ ಬರಗಾಲವಿಲ್ಲವೆಂದು ಈಗ ಖಚಿತವಾಗಿ ತಿಳಿದುಬಿಟ್ಟಿದೆ; ಆದರೆ ಚೀನಾದೇಶದ ರಾಯಭಾರಿಯು ಬಂಗಾಲದಲ್ಲಿ ಬರವಿರುವ ಮಾತನ್ನು ಪೂರ್ತಿ ನಂಬಿಬಿಟ್ಟಿದ್ದಾನೆ., ಕಲಕತ್ತೆಯಲ್ಲಿ ಬರಗಾಲವಿದೆಯೋ ಇಲ್ಲವೊ ಎಂದು ತಿಳಿದುಕೊಂಡು ಸರಕಾರಕ್ಕೆ ತಿಳುಹಿಸಲು ನನ್ನನ್ನು ನಿಯಮಿಸಿ ಕಳುಹಿಸಿದ್ದೇನೋ ನಿಜ; ಆದರೆ ಆ ಕೆಲಸ ನನ್ನಿಂದಾಗಲಿಲ್ಲವೆಂದು ಅತಿ ವಿಷಾದದಿಂದ ಹೇಳಬೇಕಾಗಿದೆ. ಬಂಗಾಲದಲ್ಲಿ ಬರಗಾಲವಿರುವದೋ ಇಲ್ಲವೋ ಎಂಬುದನ್ನು ನಿರ್ಣಯಿಸಲಿಕ್ಕೆ ನನ್ನೆದುರಿನಲ್ಲಿ ಒಂದಾದರೂ ಸರಕಾರಿಯ ಅಧಿಕೃತ ಪ್ರಕಟನೆ ಇಲ್ಲ. ಮೂರು ತಿಂಗಳ ಸೂಕ್ಷ್ಮ ವಿಚಾರಣೆ ನಡೆಯಿಸಿದರೂ ಸದ್ಯಕ್ಕೆ ಈ ಪ್ರಶ್ನೆಗೆ ಉತ್ತರ ಕೊಡುವದು ನನಗೆ ಸಾಧ್ಯವಿಲ್ಲದ ಮಾತಾಗಿದೆ. ನನ್ನ ಕಾರ್ಯದ ಬಗೆಗೆ ನನಗೆ ನಾಚಿಕೆ ಬಂದಿದೆ; ಅದಕ್ಕಾಗಿ ತಮ್ಮಲ್ಲಿ ಕ್ಷಮೆ ಯಾಚಿಸುವೆ.

ಪ್ರಭುಗಳೇ, ತಮ್ಮ ಮುದ್ದಿನ ಮಗಳು—ಸಿಮೂರಳನ್ನು ನಾನು ಪ್ರೀತಿಸುತ್ತೇನೆ. ನಿಜವಾಗಿ ಹೇಳಬೇಕೆಂದರೆ ಆಕೆಯೇ ನನ್ನನ್ನು ಪ್ರೀತಿಸುತ್ತಾಳೆ. ಸದ್ಯಕ್ಕೆ ಈ ರಾಯಭಾರಿಯ ಸ್ಥಾನದಿಂದ ನನ್ನನ್ನು ಮರುಳಿ ಕರೆಯಿಸಿರಿ; ಸಿಮೂರಳೊಂದಿಗೆ ಲಗ್ನ ಮಾಡಿಕೊಟ್ಟು ಪುನ: ಬೇರೆ ಯಾವ ದಾದರೊಂದು ರಾಯಭಾರಿಗಳ ತಂಡದ ಮುಖ್ಯಸ್ಥನನ್ನಾಗಿ ಮಾಡಿ ಕಳುಹಿಸಿ ಕೊಡಿರಿ; ಇದಕ್ಕಾಗಿ ನಾನು ನಿಮಗೆ ಋಣಿಯಾಗುವೆ.

ಇಗರೊಂದಿಗೆ ತಮ್ಮ ಅಪ್ಪಣೆ ಕೋರಿ, ನೀಲರತ್ನದ ಉಂಗುರವನ್ನು ಸಿಮೂರಳಿಗೆ ಕಳುಹಿಸಿಕೊಡುತ್ತಿದ್ದೇನೆ, ಇದು ಅರ್ವಾಚೀನ ಹಿಂದುಸ್ತಾನದ ಉಂಗುರವು; ಒಂದಾನೊಂದು ಕಾಲಕ್ಕೆ ಅಶೋಕ ಚಕ್ರವರ್ತಿಯ ಮಗಳು ಇದನ್ನು ಧರಿಸಿದ್ದಳಂತೆ !

ಸದಾ ತಮ್ಮ ನಂಬಿಯ
ಸೇವಕನಾಗಿರುವ
(ಅಂಕಿತ) **ಎಫ್. ಬಿ ಉಲ್ಲುಸನ್ನ**
ಸಿಲೋರಿಕಾ ಪ್ರಜಾಪ್ರಭುತ್ವದ ರಾಯಭಾರಿ.

---

## ಎರಡನೆಯ ಭಾಗ

# ನಿರ್ಜೀವ ಮನುಷ್ಯ

ಬೆಳಗಿನಲ್ಲಿ ತಿಂಡಿಯನ್ನು ತಿನ್ನುತ್ತ ಅವನು ವರ್ತಮಾನಪತ್ರವನ್ನು ಓದುತ್ತಿದ್ದನು. ಅಂದಿನ ಪತ್ರದಲ್ಲಿ ಉಪವಾಸಕ್ಕೆ ತುತ್ತಾದ ದುರ್ದೈವಿ ಬಂಗಾಲಿಗಳನೇಕರ ಚಿತ್ರಗಳಿದ್ದವು: ಜನರು ಬಿದ್ದು ಸಾಯದ ಸ್ಥಳಗಳೇ ಇರಲಿಲ್ಲ; ಎಲ್ಲೆಲ್ಲಿಯೂ ಹೆಣಗಳೇ ಹೆಣಗಳು; ಗಿಡಗಳ ಅಡಿಗಳಲ್ಲಿ; ಬೀದಿಗಳ ಮೇಲೆ, ಪೇಟೆಯ ಸಾಲುಗಳಲ್ಲಿ, ಬಿತ್ತರವಾದ ಬಾಂದಳದ ಕೆಳಗಿನ ಹೊಲಗಳಲ್ಲಿಯೂ ಹೆಣಗಳು ಕಣ್ಣಿಗೆ ಕಾಣಿಸುತ್ತಿದ್ದವು; ಒಂದೆರಡೇ ಹೆಣಗಳಲ್ಲ; ಸಾಸಿರಗಟ್ಟಲೆ ಒಟ್ಟಾಗಿ ಸತ್ತು ಬಿದ್ದುದು ಕಂಡುಬರುತ್ತಿತ್ತು.

ಹಲವರ ಜೀವ ಇನ್ನೂ 'ಟುಕು, ಟುಕು' ಅನ್ನುತ್ತಿತ್ತು; ಮೃತ್ಯುದೇವತೆ ಅವರನ್ನು ಸಂತೈಸಲು ಜೋಗುಳ ಹಾಡುತ್ತಿದ್ದಳು. ಅವರು ಬದುಕಿ ಉಳಿಯುವ ಆಶೆಗಳೊಂದಾದರೂ ಇರಲಿಲ್ಲ; 'ಆಮಲೆಟ್ಟ'ತಿನ್ನುತ್ತಲೇ ಅವನು ಈ ದರಿದ್ರ ದು:ಖಿಗಳಿಗೆ ಯಾವ ರೀತಿಯ ನೆರವೀಯಬೇಕೆಂಬ ವಿಚಾರವನ್ನು ಮೆಲುಕುಹಾಕುತ್ತಿದ್ದನು. ಮತ್ತೆ ಅವರಿಗೆ ಜೀವದಾನ ಕೊಟ್ಟು ಮೊದಲಿನಂತೆ ಕುಲುಕುಲು ನಗುವಂತೆ ಮಾಡುವದು ಸಾಮಾನ್ಯವಾದ ಮಾತಾಗಿರಲಿಲ್ಲ; ಅದೊಂದು ಅಂತಃಕರಣಕ್ಕೂ ನಿಲುಕದ ಅಮಾನುಷ ಕತೆ! ಅವಸರದಲ್ಲಿ ಅದೇ ವರ್ತಮಾನ ಪತ್ರವನ್ನು ಮೇಜಿನ ಮೇಲೆ ಹರಡಿದನು; ಅದರಮೇಲೆ ಹುರಿದ 'ಬ್ರೆಡ್ಡಿ'ನ ಚೂರು ಹಾಕಿ ಅವುಗಳಿಗೆ ಗುಳಂಬ ಹಚ್ಚಿದನು. ಹುರಿದ ಬ್ರೆಡ್ಡುಗಳು ಇನ್ನೂ ಬಿಸಿಯಾಗಿದ್ದವು; ಬಿರುಸಾಗಿದ್ದವು; ಗುಳಂಬದ ಹುಳಿ ಮಿಶ್ರಿತ ಸಿಹಿ ರುಚಿಯು ಹುರಿದ ಬ್ರೆಡ್ಡುಗಳ ರುಚಿಯನ್ನು ಹೆಚ್ಚಿಸಿತ್ತು, ಅವುಗಳಿಂದ ಒಂದು ತೆರನಾದ 'ಘಮಘಮ'ವಾಸನೆಯು ಬರುತ್ತಿತ್ತು; ಅದು ಸೌಗಂಧವನ್ನು ಬೀರುವ ಹೆಣ್ಣಿನ ಸೌಂದರ್ಯವನ್ನು ನೆನಪು ಮಾಡಿಕೊಡುತ್ತಿತ್ತು.

ಒಮ್ಮೆಲೇ ಅವನಿಗೆ ಸ್ನೇಹಲತೆಯ ನೆನಹು ಮೂಡಿತು. ಆಕೆ ಬೆಳಿಗ್ಗೆ ಚಹಕ್ಕೆ ಬರುವದಾಗಿ ಮಾತು ಕೊಟ್ಟಿದ್ದಳು; ಇನ್ನೂ ಬಂದಿರಲಿಲ್ಲ. ಆಕೆ ಯಿನ್ನೂ ಮಲಗಿದ್ದಿರಬೇಕು ! ವೇಳೆ ಎಷ್ಟು ?

ಎಳೆಯ ಮೃದು ಚರ್ಮದಲ್ಲಿ ಎದ್ದು ತೋರುವ, ಕರಿಯ ರೇಶ್ಮೆಯ ಪಟ್ಟಿಯನ್ನು ಕಟ್ಟಿದ ಭಂಗಾರದ ಕೈಗಡಿಯಾರದ ಕಡೆಗೆ ನೋಡಿದನು; ಗಡಿಯಾರ, ಬಿರಡಿ, 'ಟಾಯಪಿನ್ನಗಳ'ಷ್ಟೇ ಗಂಡಸರು ಧರಿಸಬೇಕು; ಆದರೆ ಈ ಹೆಂಗಸರಿಗೆ ! ತಮ್ಮ ದೇಹವನ್ನೆಲ್ಲ ಮುಚ್ಚುವಷ್ಟು ಆಭರಣಗಳು ಬೇಕು— ಕಿವಿಗಳಿಗೆ ಬೆಂಡೋಲೆ: ಕಾಲುಗಳಿಗೆ ಪೈಜಣ; ನಡುವಿಗೆ ಪಟ್ಟಿ; ಮೂಗಿಗೆ ಮೂಗುಬಟ್ಟು; ತಲೆಗೆ ಹೂವು; ಕುತ್ತಿಗೆಗೆ ಸರ; ಕೈಗಳಿಗೆ ಬಳೆ; ಇಡೀಯ ಮೈಗೆ ಆಭರಣಗಳು ಬೇಕೆ ಬೇಕು; ಹೆಣ್ಣುಮಕ್ಕಳು ಇಷ್ಟು ಆಭರಣ ಧರಿಸುತ್ತಾರೆ; ಗಂಡಸರು ಮೇಲಿನ ಮೂರೇ ಆಭರಣಗಳನ್ನೇಕೆ ಧರಿಸಬೇಕು ? ಎರಡು 'ಟಾಯಪಿನ್ನ' ಧರಿಸುವದು, ಬೇರೆ ಪ್ಯಾಶನ್ನಿನ ಸೀಮೆ ಮೀರುವದಂತೆ....

ಇಷ್ಟೆಲ್ಲ ವಿಚಾರಗಳು ತಲೆಯಲ್ಲಿ ಸುತ್ತುತ್ತಿದ್ದವು; ಗಂಟಲಿನಲ್ಲಿ ಗಂಜಿಯು ಇಳಿಯುತ್ತಲೇ ಇತ್ತು. ಅದಕ್ಕಿದ್ದ ಏಲಕ್ಕಿಯ ವಾಸನೆಯು ಸುತ್ತಲೂ ಹರಡಿತ್ತು. ಒಮ್ಮೆಲೇ ಆ ಸೌಗಂಧವು ಅವನನ್ನು ಪುಲಕಿತನನ್ನಾಗಿ ಮಾಡಿತು. ಅಂಥದೇ ವಾಸನೆಯ ಜ್ಞಾಪಕ ಬಂತು ! ಅದುವೇ ಸ್ನೇಹಲತೆ ಅವನೊಂದಿಗೆ ಕುಣಿಯುವಾಗ ತೊಟ್ಟ ತೋಳುಗಳಿಲ್ಲದ ಪೋಲಕ ಮತ್ತು ಉಟ್ಟ ರೇಶ್ಮೆಯ ಸೀರೆಗೆ ಚಿಮುಕಿಸಿಕೊಂಡ ಅತ್ತರಿನ ವಾಸನೆ !

ಹಾ ! ಕಳೆದ ಇರುಳು ಅದೆಷ್ಟು ರಮ್ಯಮಧುರವಾಗಿತ್ತು !! ಆಗಿನ ದೃಶ್ಯವಿನ್ನೂ ಅವನ ಕಣ್ಣೆದುರಿನಲ್ಲಿ ನರ್ತಿಸುತ್ತಿದೆ. 'ಗ್ರಾಂಡಹೋಟಲಿ'ನಲ್ಲಿಯ ನೃತ್ಯವನ್ನು ಕೇಳುವದೆ ? ಸದಾ ಶ್ರೇಷ್ಠವಾದುದೇ; ಜೊತೆಯನ್ನು ಆರಿಸುವದರಲ್ಲಿ ಅದೆಷ್ಟು ಬುದ್ಧಿ ವೆಚ್ಚಮಾಡಿದ್ದರು ! — ಅವನು ಮತ್ತು ಸ್ನೇಹಲತಾ !! ನೆರದ ನೆರವಿಯ ಕಂಗಳು ಅವರಲ್ಲಿಯೇ ಕೇಂದ್ರೀಕೃತವಾಗಿದ್ದವು. ಆಕೆ ಧರಿಸಿದ ಭಂಗಾರದ ಬೆಂಡೊಲೆಗಳು ಕಿವಿಗಳನ್ನು ಮುಚ್ಚಿದ್ದವು; ತುಟಿಗಳಲ್ಲಿ ಸದಾ ಮುಗುಳು ನಗೆ ನಲಿಯುತ್ತಲೇ ಇತ್ತು; ಆಕೆ ಕೊರಳಲ್ಲಿ ಧರಿಸಿದ ಮುತ್ತಿನ ಸರವು ಥಳಥಳಿಸಿ ಮಿನುಗುತ್ತ, ಮುರಿಹೊಡೆದು ಗರಗರನೆ ತಿರುಗುತ್ತ, ಅಂಕಡೊಂಕಾಗಿ ಸುತ್ತಿಕೊಂಡು ಎದೆಯ ಮೇಲೆ, ಉದ್ರೇಕಗೊಂಡ ಹಾವಿನಂತೆ

ಬಿದ್ದಿತ್ತು. ಕುಣಿದ ರಂಭಾನೃತ್ಯ ಎಷ್ಟು ಘನವಾದುದು! ತಾಳಬದ್ಧವಾಗಿ ಮಣಿದ ದೇಹ ಅದರೊಂದಿಗೆ ಸರಿದುಹೋಗುವ ಉಟ್ಟ ಜಾರ್ಜೆಟ್ಟ ಸೀರೆಯು ಗೂಡಿಸುವಂತಿರುವ ನೀರಿಗೆಯ ತೆರೆಗಳು, ಬೆಳ್ಳಿಯಂತೆ ಥಳಥಳಿಸುವ ಉಸುಕನ್ನು ಮುತ್ತಿಡಲು ತವಕಿಸಿ ಹೆಣಗಾಡುತ್ತಿರುವ ತಿಂಗಳಿನ ಪಡಿರೂಪಗಳನ್ನಳ-ವಡಿಸಿಕೊಂಡ ಕಡಲ ತೆರೆಗಳಂತೆ ತೋರುತ್ತಿದ್ದವು. ತೆರೆಗಳು ಸಾವಕಾಶವಾಗಿ ಮುನ್ನಡೆದು ಸಾಗರ ದಂಡೆಯನ್ನು ಮುಟ್ಟಿ ಮತ್ತೆ ಹಿಂದೆ ಹೋಗಿ ಬಿಡುತ್ತವೆ. ಆಗ ಒಂದು ತೆರನಾದ ಸರಬರ ಸದ್ದು ಕೇಳಬರುವದು. ಮರುಕ್ಷಣದಲ್ಲಿ ಎಲ್ಲವೂ ಶಾಂತವಾಗಿಬಿಡುವದು. ಮಂಜುಳ ರಾಗ ಏರಿ ಇಳಿಯುತ್ತದೆ. ಒಯ್ಯೊಯ್ಯನೆ, ಮೃದುವಾಗಿ, ಚಿಕ್ಕ ಚಿಕ್ಕ ಅಲೆಗಳು ಜ್ಯೋತ್ಸ್ನ ತುಂಬಿದ ಕಡಲ ಅಂಚನ್ನು ಮುತ್ತಿಟ್ಟು ಹಿಂದೆ ಸರಿಯುತ್ತಿವೆ............ಅರೆದೆರೆದ ತುಟಿಗಳ ಮಧ್ಯದಲ್ಲಿ ಸ್ನೇಹಲತೆಯ ದಂತಗಳು ಮುತ್ತಿನಂತೆ ಝುಗಝುಗಿಸುತ್ತಿದ್ದವು.... ಒಮ್ಮೆಲೇ ದೀಪಗಳು ಆರಿದವು; ತುಟಿಗಳು ತುಟಿಗಳನ್ನಾವರಿಸಿದವು; ದೇಹವು ದೇಹವನ್ನಾಶ್ರಯಿಸಿತು; ಕಂಗಳು ಮುಚ್ಚಿದವು; ವಾದ್ಯದ ಮೇಳಕ್ಕೆ ಸರಿಯಾಗಿ ಸ್ನೇಹಲತಾ ಮತ್ತು ಅವನು ಕುಣಿದರು; ಆಹಾ! ಆ ಅಲೆಗಳ ಏರಿಳಿತಗಳು ಅದೆಷ್ಟು ಮಧುರ ಮನೋಹರವಾಗಿದ್ದವು! ಮನಸ್ಸನ್ನು ತಣಿಸುವ ರಮ್ಯವಾದ ಬಿರುಗಾಳಿ ಅತ್ತಿಂದಿತ್ತ ಇತ್ತಿಂದತ್ತ ಎಂತು ಸುಳಿದಾಡುತಲಿತ್ತು!!

ಸೇಬುಹಣ್ಣು ಹೆಚ್ಚಿದನು; ಒಂದು ಹೋಳನ್ನು 'ಫೋರ್ಕ'ದಿಂದ ಮೃದುವಾಗಿ ಚುಚ್ಚಿದನು; ಮತ್ತೆ ಕಪ್ಪಿಗೆ ಚಹವನ್ನು ಸುರಿಸುತ್ತ ವಿಚಾರಿಸಿದನು; "ಸ್ನೇಹಲತೆಯ ದೇಹ ಅದೆಷ್ಟು ಪರಿಪೂರ್ಣವಾಗಿದೆ! ಆತ್ಮದ ಅಂದವೆಷ್ಟು! ಆದರೆ ಬರಿದಾದ ಆಕೆಯ ಮನಸ್ಸು................"

ಬುದ್ಧಿಯಿದ್ದ ಲಲನೆಯನ್ನು ಕಂಡರೆ ಅವನಿಗೆ ಸೇರಿಕೆಯಿಲ್ಲ. ಅವರು ಸದಾ ಸಮತಾವಾದ, ಸಾಮ್ರಾಜ್ಯವಾದ, ಮಾರ್ಕ್ಸವಾದ, ಸ್ವಾತಂತ್ರ್ಯ, ಶಿಕ್ಷಣ ಮತ್ತು ಭವಿತವ್ಯಗಳ ಬಗೆಗೇ ಚರ್ಚಿಸುತ್ತಲಿರುವರು. ಇಂಥ ನವ-ಯುವತಿಯರು ಹೆಂಗಸರೇ ಅಲ್ಲ; ಬರೀಯ ತತ್ವಜ್ಞಾನದ ಹೊತ್ತಿಗೆಗಳು; ಇಂಥ ಯುವತಿಯರನ್ನು ಮದುವೆಯಾಗುವದಕ್ಕಿಂತ ಅರಿಸ್ಟಾಟಲನ ಕೃತಿಗಳನ್ನು ಓದುವದು ಎಷ್ಟೋ ಪಾಲು ಮೇಲು!

ದಾರಿಯನ್ನು ಕಾಯ್ದು ಕಾಯ್ದು ಅವನು ತಾಗೆಳ್ಳಿಟ್ಟನು. ಮತ್ತೆ ಗಡಿಯಾರದ ಕಡೆಗೆ ದಿಟ್ಟಿ ಸರಿಯಿತು; ಇನ್ನೂ ಸ್ನೇಹಲತೆ ಬರಲಿಲ್ಲ; ಚರ್ಚಿಲ, ಸ್ಟಾಲಿನ, ಮತ್ತು ರುಜವೆಲ್ಟರು ತೇರಹಾನದಲ್ಲಿ ಸೇರಿ ವಿಶ್ವದ ನಕಾಶವನ್ನೇ ಬದಲು ಮಾಡುವದರಲ್ಲಿ ತಲ್ಲೀನರಾಗಿದ್ದರು. ನಿತ್ಯವೂ ಬಂಗಾಲದಲ್ಲಿ ಲಕ್ಷ-ಗಟ್ಟಲೆ ಜನರು ಸಾಯುತ್ತಿದ್ದರು. ಅಟ್ಲಾಂಟಿಕ ಘೋಷಣೆ ಹೊರಟಿತ್ತು. ಬಂಗಾಲದಲ್ಲಿ ಒಂದು ಕಾಳು ಅಕ್ಕಿಯೂ ಇರಲಿಲ್ಲ. ಭಾರತದ ದಾರಿದ್ರ್ಯವು ಅವನನ್ನ ಅಲುಗಾಡಿಸಿತು. ಕಂಗಳು ನೀರಿನಿಂದ ತುಂಬಿದವು.

"ನಾವು ದರಿದ್ರರು: ನಿಃಸಹಾಯಕ; ನಮ್ಮನ್ನು ಅಡಿಗಳ ಕೆಳಗೆ ಹಾಕಿ ತುಳಿದಿದ್ದಾರೆ; ನಮ್ಮ ಮನೆ ವಿಶಾರಕವಿಯು ವರ್ಣಿಸಿದ ಮನೆಯಂತಾಗಿದೆ—'ಗೋಡೆಗಳು ಕುಸಿಯುತ್ತಲಿವೆ; ತೂತುಗಳಿಂದ ಕೂಡಿದ ಚಪ್ಪರವು ದುಃಖದ ಕಣ್ಣೀರು ಸುರಿಸುತ್ತಲಿದೆ'—ಭಾರತದವರು ಸದಾ ಕಣ್ಣೀರು ಕರೆ-ಯುತ್ತಲೇ ಇರುತ್ತಾರೆ. ಎಷ್ಟೋ ಸಲ ತಿನ್ನಲಿಕ್ಕೆ ಏನೂ ಸಿಗುವದಿಲ್ಲ. ಹಲವು ಸಂದರ್ಭಗಳಲ್ಲಿ ಧರಿಸಲು ಚಿಂದೆ ದೊರೆಯುವದಿಲ್ಲ. ಎಷ್ಟೋ ವರುಷಗಳ ವರೆಗೆ ಒಂದ್ಹನಿ ಮಳೆಯೂ ಬೀಳುವದಿಲ್ಲ; ಎಷ್ಟೋ ವರುಷ ಬಿಟ್ಟೂಬಿಡದೆ ಸುರಿಮಳೆ ಸುರಿಯುತ್ತದೆ; ಹಲವು ವರುಷ ಸುಂಕುರೋಗದ ಹಾವಳಿ; ಮತ್ತೆ ಕೆಲವು ವರುಷ ಬರಗಾಲದ ತಾಂಡವ ನೃತ್ಯ! ಸದ್ಯದ ಬಂಗಾಲದ ಮಕ್ಕಳನ್ನು ನೋಡಿ; ಬರೀಯ ಎಲುವಿನ ಹಂದರಗಳು! ದುಃಖದಿಂದ ಕಂಗಳ ಕಾಂತಿ ಸಂದಿಹೋಗಿದೆ. ಬಾಯಿ ತೆರೆದು ಬಿಕ್ಷೆ ಬೇಡುತ್ತಾರೆ—

'ಅನ್ನ! ಒಂದು ಕಾಳು ಅಕ್ಕಿ?"

ಚಹವು ಕಹಿಯಾದಂತೆನಿಸಿತು. ಆಗಲೇ ಮನಸ್ಸಿನಲ್ಲಿ ನಿಶ್ಚಯಿಸಿದನು—ನಾಡಿಗರಿಗೆ ನೆರವು ನೀಡಲೇಬೇಕು; ಧನ ಕೂಡಿಸಬೇಕು; ಭಾರತದ ಮೂಲೆ-ಮೂಲೆಗಳಿಗೆ ಹೋಗಬೇಕು; ಭಾಷಣಗಳನ್ನು ಮಾಡಿ ಜನರ ವಿವೇಕಗಳನ್ನು ಜಾಗ್ರತಗೊಳಿಸಬೇಕು; ಸಭೆ; ಮೆರವಣಿಗೆ; ಸ್ವಯಂಸೇವಕರು; ಕೊಡುಗೆಗಳು ಜೀವನ ಅಲೆಯೊಂದು ಮಿಂಚಿನ ಸೆಳಕಿನಂತೆ ದೇಶದ ತುಂಬೆಲ್ಲ ಹರಿದಾಡು-ವದು—ಒಮ್ಮೆಲೇ ಹೊಳೆಹೊಳೆವ ದಪ್ಪಕ್ಷರಗಳಲ್ಲಿ ಅವನ ಹೆಸರು ಅಚ್ಚಾದುದು ಕಾಣಿಸಿತು. ಪ್ರತಿಯೊಂದು ವರ್ತಮಾನ ಪತ್ರವು ಅವನ ದೇಶಾಭಿಮಾನದ ಸೇವೆಯನ್ನು ಮುಕ್ತಕಂಠದಿಂದ ಹೊಗಳುತ್ತಿತ್ತು; ಆ ವರ್ತಮಾನ ಪತ್ರಗಳಲ್ಲಿ

ಅವನ ಪಡಿಯಚ್ಚೊ ಪ್ರಕಟವಾಗಿದೆ: ತರುಣನೊಬ್ಬನು ಖಾದೀ ಬಟ್ಟೆ ಧರಿಸಿದ್ದಾನೆ; ಜವಾಹರಲಾಲರಂತೆ ಜಾಕೆಟ್ಟು ಹಾಕಿಕೊಂಡಿದ್ದಾನೆ; ಅವರದೇ ಆದ ಅಂದವಾದ ಮುಗುಳುನಗೆ ಮುಖವಲ್ಲಿ ನಲಿಯುತ್ತಿದೆ.

ಅದು ನಿಜ ! ಮತ್ತೆ ಒಂದು 'ಆಮಲೆಟ್ಟ' ಅಪ್ಪಣೆ ಕೊಡಿಸಿದನು;

ಅಂದಿನಿಂದಲೇ ತನ್ನ ಜೀವಿತದಲ್ಲಿ ಬದಲಾವಣೆ ಮಾಡಿ ಬಿಡಬೇಕೆನ್ನಿಸಿತು; ಅವನ ಬಾಳಿನ ಒಂದೊಂದು ಕ್ಷಣವು, ಉಪವಾಸದಿಂದ ಬೇನೆಯಿಂದ ಸಾಯುವ ಸ್ವಬಾಂಧವರ ಉದ್ಧಾರಕ್ಕಾಗಿಯೇ ಅರ್ಪಿತವಾಗಬೇಕು. ಹೆಚ್ಚೇಕೆ, ಇಡೀಯ ಜೀವನವನ್ನೇ ಅವರಿಗೆ ಮೀಸಲಾಗಿರಿಸಬೇಕೆಂದು ನಿಶ್ಚಯಿಸಿದನು. ಒಮ್ಮೆಲೇ ಸೆರೆಮನೆಯಲ್ಲಿ ಕೈದಿಯಾಗಿರುವಂತೆ ಭಾಸವಾಯಿತು;............... ವಧೆಯ ಸ್ಥಾನಕ್ಕೆ ಎಳೆದೊಯ್ಯುತ್ತಲಿದ್ದಾರೆ. ಕೊರಳಿಗೆ ಮೃತ್ಯುಪಾಶವನ್ನು ಬಿಗಿದಿದ್ದಾರೆ; ಮುಖವನ್ನೆಲ್ಲ ಕಾವಿಯ ಬಟ್ಟೆಯಿಂದ ಮುಚ್ಚಿದ್ದಾರೆ. ಅದರೊಳಗಿಂದಲೇ ಕೂಗಿ ಹೇಳಿದನು.

"ಉಪವಾಸದಿಂದ ನರಳುವ ನನ್ನ ನಾಡಿಗಾಗಿ ಪ್ರಾಣಾರ್ಪಿಸುತ್ತಿದ್ದೇನೆ" ಕಂಗಳು ವಿಚಾರಿಸುತ್ತಿದ್ದಂತೆಯೇ ನೀರಿನಿಂದ ತುಂಬಿದವು. ಉಪ್ಪುಪ್ಪಾದ ಕೆಲವು ಬಿಸಿ ಹನಿಗಳನ್ನು ಒರೆಸಿಕೊಂಡನು.

ಹೆಬ್ಬಾಗಿಲದಲ್ಲಿ ಕಾರು ಬಂದು ನಿಂತಿತು. ಸ್ನೇಹಲತಾ ಕಾರಿನ ಬಾಗಿಲು ತೆರೆದಳು. ನಗುನಗುತ್ತ ಪಾವಟಿಗೆಗಳನ್ನು ಏರಿ ಒಳಗೆ ಬಂದಳು; "ಹೆಲೋ!" ಎಂದೆನ್ನುತ್ತ ಮುಂದೆ ಬಂದು ಅವನ ಕೊರಳ ಸುತ್ತಲೂ ತನ್ನ ಕೈಗಳನ್ನು ಸುತ್ತಿ ಪರಿಮಳದಿಂದ ಕೂಡಿದ ತುಟಿಗಳನ್ನು ಗಲ್ಲಕ್ಕೆ ಹಚ್ಚಿ ಮುತ್ತು ಕೊಟ್ಟಳು. ಆಕೆಯ ಮೃದು ನಗೆಯಲ್ಲಿ ಕಾಂತಿಯಿತ್ತು; ಬಿಸಿಯಿತ್ತು; ಸೌಖ್ಯವಿತ್ತು;— ಕಹಿಯೂ ಇಲ್ಲದಿರಲಿಲ್ಲ; ಆಕೆಯ ಕಂಗಳಲ್ಲಿ ಕಹಿಯಿತ್ತು; ತುಟಿಗಣಲ್ಲಿ ಕಹಿಯಿತ್ತು; ವಕ್ರವಾಗಿ ಬಾಗಿದ ನಡುವಿನಲ್ಲಿ ಕಹಿಯಿತ್ತು; ಮೃದು ಮೂರುತಿಯಲ್ಲಿ ಕಹಿಯಿತ್ತು; ತೇಲಿ ನಡೆಯುವ ಕರುಳಿನಲ್ಲಿ ಕಹಿಯಿತ್ತು; ಆಕೆಯ ರಂಧ್ರರಂಧ್ರಗಳಲ್ಲಿ ವಿಷವು ತುಂಬಿತ್ತು; ಆಕೆ ವಿಷದ ಬಣ್ಣಗಳಿಂದ ತಗೆದ ಅಜಂತದ ಚಿತ್ರಗಳಂತಿದ್ದಳು.

"ತಿಂಡೀ ?" ಅವನು ಕೇಳಿದನು.

" ಬೇಡ; ತುಂಬಾ ಉಪಕಾರ — ನಾನು ತಕ್ಕೊಂಡಿದ್ದೇನೆ. " ಅವನ ಕಂಗಳಲ್ಲಿ ಇನ್ನೂ ನೀರು ನಿಂತಿತ್ತು; ಆಕೆ ಕೇಳಿದಳು,

" ಪ್ರಿಯಾ, ಏನಾಯಿತು ? "

" ಏನೂ ಇಲ್ಲ; ಬಂಗಾಲದ ದುರ್ದೈವಿಗಳ ಬಗೆಗೆ ಓದಿದೆ; ಸ್ನೇಹಲತಾ, ಬಂಗಾಲಕ್ಕೆ ನಾವು ಏನಾದರೂ ಮಾಡಲೇಬೇಕು. "

" ಹೂಂ ! ಪ್ರಿಯಾ ! ಅವರ ಆತ್ಮಕ್ಕೆ ಶಾಂತಿಸಿಕ್ಕಲೆಂದು ದಯಾಮಯನಲ್ಲಿ ಪ್ರಾರ್ಥನೆ ಸಲ್ಲಿಸೋಣ ! ಅದಕ್ಕೂ ಹೆಚ್ಚಿಗೆ ಮಾಡಲು ನಮಗೇನು ಸಾಧ್ಯ ? " ಕಿರುಗನ್ನಡಿಯಲ್ಲಿ ನೋಡಿಕೊಳ್ಳುತ್ತ ತುಟಿಗಳಿಗೆ ಮೆತ್ತಿಕೊಂಡ ಬಣ್ಣವನ್ನು ಸರಿಮಾಡಿಕೊಂಡಳು.

" ಸತ್ಯವಾದ ಮಾತು ! ಪ್ರತಿಯೊಂದು ದೇಗುಲ, ಮಸೀದೆಗಳಲ್ಲಿ ಉಪವಾಸದಿಂದ ಬಳಲುವ, ಸಾಯುವ ಬಂಗಾಲದವರಿಗಾಗಿ ಪ್ರಾರ್ಥನೆಗಳು ನಡೆಯಬೇಕು ! ಅಹಾ ಎಂಥ ವಿಚಾರ ! ಸ್ನೇಹಲತಾ, ನೀನೆಷ್ಟು ಬುದ್ಧಿವಂತೆ ! " ಆತನು ಉದ್ರೇಕಗೊಂಡು ಉಸುರಿದನು.

ಸ್ನೇಹಲತೆಯೂ ಸುಂದರವಾದ ಹಲ್ಲುಗಳನ್ನು ಕಿರಿದು ಹೇಳಿದಳು.

" ಎಷ್ಟೆಂದರೂ ' ಕಾನ್ವೆಂಟ ' ಶಿಕ್ಷಣವಲ್ಲವೇ ! "

ಮತ್ತೆ ಕೆಲಹೊತ್ತು ವಿಚಾರಿಸಿ ಆಕೆಗೆ ಹೇಳಿದನು.

" ನಾವೂ — ನಾವು ಸಹಿತ ಒಂದು ಗೊತ್ತುವಳಿಯನ್ನು ಪಾಸುಮಾಡಬೇಕು ! "

" ಏಕೆ ? "

ಸೀರೆಯ ಸೆರಗನ್ನು ಸರಿಮಾಡುತ್ತ ಸ್ನೇಹಲತೆ ಕೇಳಿದಳು.

" ಏಕೆಂಬುದು ಸರಿಯಾಗಿ ನನಗೆ ತಿಳಿಯದು; ದೇಶದಲ್ಲಿ ಏನಾದರೊಂದು ಆಪತ್ತು ಒದಗಿದಾಗ ಗೊತ್ತುವಳಿಯನ್ನು ಪಾಸುಮಾಡುತ್ತಾರೆಂಬುದು ಮಾತ್ರ ಗೊತ್ತು ! ಗೊತ್ತುವಳಿಯನ್ನು ಪಾಸುಮಾಡುವದರಿಂದ ಎಲ್ಲ ಆಪತ್ತುಗಳು ದೂರವಾಗುತ್ತವೆಂದು ಕೇಳಿದ್ದೇನೆ............ನಾನು ಒಬ್ಬ ಮುಖಂಡನ ಬಳಿಗೆ ಹೋಗಿ ಗೊತ್ತುವಳಿಯನ್ನು ಹೇಗೆ ಬರೆಯಬೇಕೆಂದು ಕೇಳುವವನಿದ್ದೇನೆ. "

" ಪ್ರಿಯಾ, ಅದನ್ನೆಲ್ಲ ಮರೆತುಬಿಡು; ಹೇಳು, ನನ್ನ ಹೆರಳಿನಲ್ಲಿ ಈ ಹೂವು ಹೇಗೆ ಕಾಣುತ್ತದೆ ? " ಆಕೆ ನಸುನಗುತ್ತ ಮುರಕಮಾಡಿಕೇಳಿದಳು.

ಆಕೆಯ ಹೆರಳಿನಲ್ಲಿದ್ದ ನೀಲರಾಜ ಪುಷ್ಪದ ದೇಟನ್ನು ಮೃದುವಾಗಿ ಮುಟ್ಟಿದನು. " ಅದೆಷ್ಟು ಅಂದವಾಗಿದೆ ಹೂ ! ಶ್ರೀಕೃಷ್ಣನ ದೇಹದಂತೆ ನೀಲವರ್ಣದ ಹೂ !!............ "

ಸ್ವಲ್ಪ ಸಮಯ ಮೌನವಾಗಿದ್ದು ಮತ್ತೆ ಹೇಳಿದನು.

" ಇಲ್ಲ; ಇಲ್ಲ; ಗೊತ್ತುವಳಿಯನ್ನು ಪಾಸುಮಾಡಲೇ ಬೇಕು; ' ಟಿಲಿಫೋನಿ 'ನಲ್ಲಿ ಒಬ್ಬನನ್ನು ಕರೆಯುತ್ತೇನೆ. "

ಆಕೆಯು ಅವನನ್ನು ತಡೆದಳು. ಆಕೆಯ ಕೋಮಲವಾದ ಬೆರಳುಗಳ ಮೃದುಸ್ಪರ್ಶವು ಅವನ ನರನರಗಳಲ್ಲಿ ಹರಿದಾಡಿತು. ಮೃದು ಭಾವನೆಗಳ ಅಲೆಗಳು ಅವನನ್ನು ಸುತ್ತಿದವು.

" ನಿನ್ನೆಯ ದಿನದ ರಂಭಾನೃತ್ಯ ಎಷ್ಟೊಂದು ಸ್ವರ್ಗೀಯವಾಗಿತ್ತು ! " ಆಕೆ ಮುತ್ತಿಡುತ್ತ ನೆನಪು ಮಾಡಿಕೊಟ್ಟಳು.

ಇರುವೆಯ ಸೈನ್ಯವೊಂದು ಅವನ ಮಿದುಳನ್ನು ತಿನ್ನುತ್ತಿರುವಂತೆನಿಸಿತು; ನಿರ್ಭಾಗ್ಯರು ಸಾಸಿರ ತಂಡಗಳಲ್ಲಿ ಬಂದು ಅವನ ತಲೆಯಲ್ಲಿ ನೆರೆದಂತೆನಿಸಿತು; ಅವರನ್ನು ಹೊರದೂಡಿಬಿಡುವದು ಸಾಧ್ಯವಾಗಲಿಲ್ಲ.

" ಹೇಳು, ಸ್ನೇಹಲತಾ, ಗೊತ್ತುವಳಿಯನ್ನು ಪಾಸುಮಾಡಿದ ನಂತರ ಏನು ಮಾಡೋಣ ?................ಬರಗಾಲಪೀಡಿತ ಪ್ರದೇಶಗಳಲ್ಲಿ ತಿರುಗಾಡೋಣ ! ................ನಿನಗೇನೆನಿಸುತ್ತದೆ ? "

" ಈ ವಿಷಯವನ್ನು ಅಷ್ಟೊಂದು ಏಕೆ ಮನಸ್ಸಿಗೆ ಹಚ್ಚಿಕೊಂಬುವದು? ಹೀಗೆಯೇ ಮಾಡಿದ್ದಾದರೆ ಖಂಡಿತವಾಗಿಯೂ ನೀವು ಬೇನೆ ಬೀಳುವಿರಿ; ಅವರ ಪಾಡಿಗೆ ಅವರನ್ನು ಬಿಟ್ಟುಬಿಡಿರಿ; ಹೇಗೂ ಆ ದರಿದ್ರರು ಸಾಯುವದು ನಿಶ್ಚಿತ; ಶಾಂತರಾಗಿ ಸಾಯಲಿ ! ನೀವೇಕೆ ಅವರ ಬಗೆಗೆ ಇಷ್ಟು ಕಳವಳಗೊಂಡಿದ್ದೀರಿ ? " ಕಳಕಳಿಯ ಧ್ವನಿಯಲ್ಲಿ ಸ್ನೇಹಲತಾ ಸಲಹೆ ಕೊಟ್ಟಳು.

“ ಇಲ್ಲ; ಅದಾಗದು; ನಾನು ಬರಗಾಲಪೀಡಿತ ಪ್ರದೇಶದಲ್ಲಿ ಅಡ್ಡಾಡಿ ಕೊಂಡು ಬರಲೇಬೇಕು; ಬರಲೇಬೇಕು ! ಸ್ನೇಹಲತಾ, ನೀನೂ ನನ್ನೊಂದಿಗೆ ಬರುವೆಯಲ್ಲವೆ ? ”

“ ಎಲ್ಲಿಗೆ ? ”

“ ಹಳ್ಳಿಗಳಿಗೆ ”

“ ನನಗೂ ಹಳ್ಳಿಗಳೆಂದರೆ ತುಂಬಾ ಮಮತೆ; ಅಲ್ಲಿ ಏನಿರುವದು ? ಅಲ್ಲಿ ಒಳ್ಳೇಯ ಹೋಟಲುಗಳಿವೆಯೋ ? ”

ಹೋಟಲು ! ಆ ಒಂದೇ ಒಂದು ಶಬ್ದ ಅವನ ವಿಚಾರವನ್ನೆಲ್ಲ ಮೆಟ್ಟಿ ನಿಂತಿತು; ಈಗಾಗಲೇ ಅದೆಷ್ಟೋ ಮಹತ್ವಾಕಾಂಕ್ಷೆ ಮತ್ತು ವಿಚಾರಗಳ ಮೌಸಣ ವಟ್ಟಿಯಾದ್ದ ಮನಸ್ಸಿನಲ್ಲಿ ಅದನ್ನು ಹುಗಿದುಬಿಟ್ಟನು.

ಕೆಲಹೊತ್ತು ಮೌನಿಯಾಗಿ, ಮಕ್ಕಳಂತೆ ಬಿಗಿದುಕೊಂಡು ಕುಳಿತನು. ಸ್ನೇಹಲತೆಯೇ ಮೌನವನ್ನು ಮುರಿದು ಸೂಚಿಸಿದಳು.

“ ಮಾಡಬೇಕಾದುದನ್ನು ನಾನು ಹೇಳುತ್ತೇನೆ. ‘ಗ್ರಾಂಡಹೋಟಲಿ’ ನಲ್ಲಿ ಒಂದು ದೊಡ್ಡ ನೃತ್ಯವನ್ನು ಏರ್ಪಡಿಸೋಣ; ಪ್ರವೇಶದ ದರವನ್ನು ಐವತ್ತು ರೂಪಾಯಿಗಳಿಗೆ ಏರಿಸೋಣ; ಕುಡಿಯುವದರ ವೆಚ್ಚ ಬೇರೆಯೇ ! ಆದಾಯ ವನ್ನೆಲ್ಲ ಪರಿಹಾರ ದ್ರವ್ಯಕ್ಕೆ ಕಳುಹಿಸೋಣ...............”

ಅವನು ಖುರ್ಚಿಯಿಂದ ಚಂಗನೆ ಜಿಗಿದು, ಆನಂದಪರವಶನಾಗಿ ಆಕೆ ಯನ್ನು ಅಪ್ಪಿಕೊಂಡುಬಿಟ್ಟನು.

“ ಪ್ರಿಯೆ, ನಿನ್ನ ಆತ್ಮವೆಷ್ಟು ಉದಾರವಾಗಿದೆ ಬಲ್ಲೆಯಾ ? ”

“ ನಿನ್ನೆ ರಾತ್ರಿಯೇ ಈ ವಿಷಯವನ್ನು ನೀವೇಕೆ ಸೂಚಿಸಲಿಲ್ಲ ? ” ಸ್ನೇಹಲತಾ ಕೇಳಿದಳು.

“ ನಾನು ಸೂಚಿಸಿದ್ದರೆ ನೀನು ಒಪ್ಪುತ್ತಿದ್ದೆಯಲ್ಲವೇ ? ”

“ ಒಪ್ಪುತ್ತಿರಲಿಲ್ಲ. ” ಆಕೆ ನಾಚಿಕೆಯಿಂದ ನಿಜವನ್ನು ನುಡಿದಳು.

“ ನಿನ್ನಂತೆಯೇ ನನ್ನದೂ ಸ್ಥಿತಿಯಾಗಿತ್ತು; ನಾನಾಗ ಕುಡಿದಿದ್ದೆನು ”

* * *

ಮೋಟಾರು ಕಾರು ತಂಬಾಕದ ವ್ಯಾಪಾರಿ, ಮೆಯೋನಿರಾಮು, ಜೆವ್ನಿ ರಾಮು ಭೊಂಡೋಮಲ್ಲನ ಅಂಗಡಿಯ ಎದುರಿದಲ್ಲಿ 'ಬ್ರೆಕ್ಸ' ಹಾಕಿದ ಸಪ್ಪಳ ಫ಼ಾಡುತ್ತ ನಿಂತಿತು. ಆ ಅಂಗಡಿಯ ಎದುರಿನಲ್ಲಿಯೇ ಗ್ರ್ಯಾಂಡ ಹೋಟಲು; ಅದು ಮೊಘಲರ ಗುಮ್ಮಟದಂತೆ ಅತಿ ಎತ್ತರವೂ ಪಿಶಾಲವೂ ವೈಭವಪೂರ್ಣವೂ ಆಗಿತ್ತು !

"ಏ ದೋದಿನ ಖೇತೆ ಪಾಯನಿ ಕಿಚ್ಛೂ ಖೇತೆ ದೋ"

ಒಬ್ಬ ಬಂಗಾಲಿಯ ಹುಡುಗನು, ಬೀದಿಯಲ್ಲಿ ಬಿಕ್ಕೆ ಬೇಡುತ್ತ ನಡೆದಿದ್ದನು; ಅವನುಟ್ಟ ಧೋತರವೆಲ್ಲ ಹರಿದು ಚಿಂದೆಯಾಗಿತ್ತು; ಅವನೊಂದಿಗೆ ಒಂದು ಪುಟ್ಟ ಹುಡಿಗೆಯಿತ್ತು; ಧೂಳವಿಡಿದು, ಬೆವರಿನಿಂದ ಮಜ್ಜನಗೈದಂತಿದ್ದ ಆ ಬಾಲಿಕೆ ಖಿನ್ನವದನೆಯಾಗಿದ್ದಳು. ಆ ಕೂಗನ್ನು ನೋಡಿ ಸ್ನೇಹಲತಾ ಅಸಹ್ಯತೆಯಿಂದ ಬೇರೆ ಕಡೆಗೆ ಮುಖ ತಿರುವಿದಳು.

"ಮೆಮ್ ಸಾಹೀಬ, ಏಕ್ಟಾ ಪೊಯಶಾ ದಾವ್ವ- ಬೊರೆ ಖಿದೆ ಪಿಯೆಛ್ಛೆ" ಹುಡುಗನು ದೀನನಾಗಿ ಅಂಗಲಾಚುತ್ತಿದ್ದನು.

ಅವನು ಸ್ನೇಹಲತೆಯನ್ನು ಕೇಳಿದನು.

"ನಿನಗೆ ಯಾವ ಸಿಗರೇಟನ್ನು ತರಲಿ ? "

"ಟರ್ಕಿಸ" ಸ್ನೇಹಲತೆ ಉತ್ತರವಿತ್ತಳು;

ಅಂಗಡಿಯೊಳಗೆ ನಡೆದನವನು. ಸ್ನೇಹಲತೆಯೊಬ್ಬಳೇ ಮೋಟಾರಿನಲ್ಲಿ ಉಳಿದಳು. ಹಸಿದು ಗುಂಯ್ಗುಡುವ ಬಂಗಾಲದ ನೊಣಗಳು ಆಕೆಯ ಮೆದುಳನ್ನು ಕೊರೆಯುತ್ತಿದ್ದವು.

"ಮೆಮ್ ಸಾಹೀಬ ! ಮೆಮ್ ಸಾಹೀಬ !!........ಮೆಮ್ ಸಾಹೀಬ !!!

ಒಂದೆರಡು ಸಲ ಅವರನ್ನು ಗದ್ದರಿಸಿದಳು. ಆದರೆ ಹಸಿವು ಅಷ್ಟು ಗದ್ದರಿಕೆಗೆ ಅಂಜಿ ತೊಲಗಿ ಹೋಗುವದಿಲ್ಲ. ಆ ಚಿಕ್ಕ ಹುಡಿಗಿ ಮುಂದೆ ಬಂದು, ಸ್ನೇಹಲತೆಯ ಸೀರೆಯ ಅಂಚನ್ನು ಮುಟ್ಟಿ ಕಣ್ಣುಗಳಲ್ಲಿ ನೀರು ತಂದು, ಅಂಗಲಾಚಿದಳು.

"ಮೆಮ್ ಸಾಹೀಬ !........ಮೆಮ್ ಸಾಹೀಬ........ಮೆಮ್ ಸಾಹೀಬ ................"

ಸ್ನೇಹಲತೆ ಕೆರಳಿದಳು. ಹುಡಿಗೆ ಸೀರೆಯ ಅಂಚನ್ನು ಹಿಡಿದು ಕೊಂಡಿತ್ತು; ಅದನ್ನು ಜಗ್ಗಿದಳು; ಅಷ್ಟರಲ್ಲಿ ಅವನು ಬಂದನು; ಸ್ನೇಹಲತಾ ತಕರಾರು ಹೇಳಿದಳು.

''ಈ ಬಿಕ್ಷುಕರಿಂದ ನನಗೆ ಸಾಕಾಗಿ ಹೋಗಿದೆ. ಅವರು ಅಸಹ್ಯರಾಗಿದ್ದಾರೆ; ಭೀಕರರಾಗಿದ್ದಾರೆ ನಗರದಿಂದ ಹೊರಗೇಕೆ 'ಕಾರ್ಪೊರೇಶನ್ನ' ದವರು ಇವರನ್ನು ಇಡುವ ಪ್ರಯತ್ನ ನಡೆಸಿಲ್ಲ? ನೀವು ಅಂಗಡಿಯ ಒಳಗಿದ್ದಿರಿ; ಇಲ್ಲಿ ಇವರು ಕಾಡುತ್ತಿದ್ದರು........''

ಮಗುವಿಗೊಂದು ಬಲವಾದ ಏಟುಕೊಟ್ಟು ಧೂಳವಿಡಿದು ಮಾಸಿದ ಆ ಚಿಕ್ಕ ಹುಡಿಗೆಯ ಕೂದಲುಗಳನ್ನು ಹಿಡಿದು ದೂರ ಬಿಸುಟಿದನು; ಮೋಟಾರು ಸುರುವು ಮಾಡಿದನು; ಮೋಟಾರು 'ಗ್ರ್ಯಾಂಡ ಹೋಟಲಿ'ನ 'ವರ್ಹಾಂಡ'ದ ಒಳಗೆ ನಡೆಯಿತು.

ಕಾಲು ದಾರಿಯಮೇಲೆ ಆ ಹುಡಿಗೆ ಹೋಗಿ ಬಿದ್ದಳು; ಬಿಕ್ಕಿಬಿಕ್ಕಿ ಅಳಹತ್ತಿದಳು. ಆ ಹುಡುಗನು ತಂಗಿಯ ಸಮೀಪಕ್ಕೆ ಹೋಗಿ ಆಕೆಯನ್ನು ರಮಿಸಿ, ಎಬ್ಬಿಸಿ, ವಾತ್ಸಲ್ಯದಿಂದ ಅಂದನು.

''ತುಮ್ಹಾರ ಕೊ ಥಾವೊ ಲಾಗೆ ನೆ ತೊ ?"

ಆ ಪುಟ್ಟ ಬಾಲಿಕೆಯು ನಿರಾಶಳಾಗಿ ಬಿಕ್ಕುತ್ತಲೇ ಇದ್ದಳು-

* * *

ನೃತ್ಯಕ್ರೀಡಾ ಮಂದಿರವು ಜನರಿಂದ ಕಿಕ್ಕಿರಿದು ತುಂಬಿ ಹೋಗಿತ್ತು! ನೃತ್ಯವು ಪ್ರಾರಂಭವಾಗಿತ್ತು; ಒಳ್ಳೆಯ ವಿಜೃಂಭಣೆಯಿಂದ ನಡೆದಿತ್ತು;

ಸ್ನೇಹಲತೆಯೊಂದಿಗೆ ಅವನು, ಕುಣಿದುದರಿಂದ ನೋವಾದ ಕಾಲುಗಳ ದಣಿವನ್ನು ಕಡಿಮೆ ಮಾಡಿಕೊಳ್ಳುವದಕ್ಕೆಂದು ಹೊರಗೆ ಕುಳಿತಿದ್ದನು.

ಸ್ನೇಹಲತಾ ಕೇಳಿದಳು.

''ಎಷ್ಟು ಹಣ ಕೂಡಿತು ? ''

''ಆರು-ಸಾವಿರ-ಐದುನೂರು ರೂಪಾಯಿಗಳು"

''ಇನ್ನೂ ಅಷ್ಟೊಂದು ರಾತ್ರಿಯಾಗಿಲ್ಲ; ಬೆಳಗಿನ ನಾಲ್ಕುಘಂಟಿಯೊಳಗಾಗಿ ಇನ್ನೂ..........................."

"ಒಂಭತ್ತು ಹತ್ತು ಸಾವಿರ ಕೂಡಬಹುದು."

"ನೀವು ತುಂಬಾ ದಣಿದಿದ್ದೀರಿ" ಆಕೆಯು ಕೈ ಅವನ ಬೆರಳುಗಳನ್ನು ಮೃದುವಾಗಿ ಒತ್ತುತ್ತಿತ್ತು.

"ನಿನಗೇನು ಬೇಕು ?"

"ನಿಮಗೇನು ಬೇಕು ?"

"'ಜಿನ್ನ' ಮತ್ತು 'ಸೋಡಾ'"

"ಮಾಣಿ ! ಸಾಹೇಬರಿಗಾಗಿ ಒಂದು ದೊಡ್ಡ 'ಜಿನ್ನ' ಮತ್ತು ಸೋಡಾ ತಕ್ಕೊಂಡು ಬಾ !" ಸ್ನೇಹಲತೆ ಆಣತಿ ವಿಧಿಸಿದಳು.

"ನಿನಗೇನೂ ಬೇಡವೆ ?"

"ನನಗೆ ಆಯಾಸವಾಗಿದೆ—ಕುಣಿದು, ಕುಡಿದು, ಕುಡಿದು ಕುಣಿದು ನನಗೆ ದಣುವಾಗಿದೆ"

"ಪ್ರಿಯೆ, ನಾಡಿಗಾಗಿ ದುಃಖ ಸಹಿಸಲೇ ಬೇಕು" ಆಕೆಯನ್ನು ಸಂತೈಸಲೆತ್ನಿಸಿದನು.

"ಸಾಮ್ರಾಜ್ಯಶಾಹಿತ್ವವನ್ನು ನಾನು ತಿರಸ್ಕರಿಸುತ್ತೇನೆ"

ಸ್ನೇಹಲತೆಯ ಧ್ವನಿಯಲ್ಲಿ ಪ್ರಾಮಾಣಿಕತೆ, ಎದ್ದು ನಿಂತಿತ್ತು: ಆಕೆ ಮಾಣಿಗೆ ಹೇಳಿದಳು.

"ಮಾಣಿ, ಒಂದು 'ವ್ಹರ್ಜಿನ' ಕೊಡು ನನಗೆ;"

ಮಾಣಿ ತಂದು ಸ್ನೇಹಲತೆಯ ಎದುರಿನಲ್ಲಿಟ್ಟನು. ಹಳದೀ ವರ್ಣದ ಮುಖದಲ್ಲೆಲ್ಲ ಎದ್ದು ತೋರುವ ಸ್ನೇಹಲತೆಯ ಕೆಂಪು ತುಟಿಗಳಂತೆ 'ಜಿನ್ನ'ದ ಕೆಂಪು ವರ್ಣ ಕಂಗೊಳಿಸುತ್ತಿತ್ತು. ಸ್ನೇಹಲತೆ ಅದನ್ನು ಗ್ಲಾಸಿನಲ್ಲಿ ಹಾಕಿ ಅಲುಗಾಡಿಸಿದಳು. ಮುಂಜಾವಿನ ಉದಯರಾಗದಂತೆ ಅದು ಗುಲಾಬಿ ಬಣ್ಣಕ್ಕೆ ತಿರುಗಿತು. ಸ್ನೇಹಲತಾ ಗ್ಲಾಸನ್ನು ಎತ್ತಿ ಬೆಳಕಿಗೆ ಹಿಡಿದಳು; ಅದು ಕೆಂಪು ಮಾಣಿಕ್ಯದಂತೆ ಶೋಭಿಸಿತು; ರಕುತದಂತೆ ಕೆಂಪಾದ ಪದ್ಮರಾಗದ ಪ್ರವಾಹ ಆಕೆಯ ಕೈಯಲ್ಲಿ ಮೇಲುಕೆಳಗಾಗುತಲಿತ್ತು !

ಮತ್ತೆ ಕುಣಿದರು– ಅವನು ಮತ್ತು ಸ್ನೇಹಲತೆ; ಒಂದೇ ರಾಗಕ್ಕೆ ಮೇಳವಾಗಿ, ಒಂದೇ ತಾಳದಲ್ಲಿ ಅವರು ಕುಣಿದರು. ಉಳಿದುದಕ್ಕೆ ಅಷ್ಟೊಂದು ಮಹತ್ವವಿರಲಿಲ್ಲ; ಕಡಲು ದೂರದಲ್ಲಿತ್ತು. ಅತಿ ದೂರದಲ್ಲಿ–ಅತಿದೂರ ದಲ್ಲಿತ್ತು; ಬಿತ್ತರವಾದ ವಿಶ್ವದಲ್ಲಿ ಲೋಕವು ಲೀನವಾಗಿತ್ತು. ಅವರಿಬ್ಬರು ಚಿಕ್ಕೆಗಳು ಚಿಮುಕಿಸುವ ಆಗಸದಲ್ಲಿ ನಲಿಯುತ್ತಿದ್ದರು.

ಆತನ ಭುಜಕ್ಕೆ ಆಕೆ ತನ್ನ ಗಲ್ಲವನ್ನು ಹಚ್ಚಿದಳು; ಮನ ಮೋಹಿಸುವ ಆಕೆಯ ಕೂದಲಿನಿಂದ ಹೊರಡುವ ಸೌಗಂಧವು ಅವನನ್ನು ತೂಕಡಿಸುವಂತೆ ಮಾಡಿತ್ತು ! ಆಕೆ ಕೂದಲುಗಳನ್ನು ಹಿಕ್ಕಿ ಕಟ್ಟುವ ಬಗೆಯೋ ಒಂದು ತೆರ ನಾಗಿತ್ತು; ಉಳಿದ ಹುಡಿಗೆಯರಂತೆ ಒಂದೆರಡು ತೆರನಾದ ಆಧುನಿಕ 'ಫ್ಯಾಶನ್ನು'ಗಳಿಂದ ಆಕೆಗೆ ತೃಪ್ತಿಯಿಲ್ಲ.

ಕಲಾವಿದನೊಬ್ಬನು ತನ್ನ ಸುಂದರವಾದ ಕಲಾಕೃತಿಯನ್ನು ನಿರ್ಮಿಸು ವದರ ಕಡೆಗೆ ಲಕ್ಷಗೊಡುವಂತೆ ಆಕೆ ತನ್ನ ಕೂದಲುಗಳನ್ನು ಶೃಂಗರಿಸುವದರ ಕಡೆಗೆ ಲಕ್ಷ ಹಾಕುತ್ತಾಳೆ. ಒಂದು ದಿವಸ ಆಕೆಯ ಕೂದಲುಗಳು ಕಮಲ ದಂತಿದ್ದರೆ, ಮರುದಿವಸ ನಾಗರಹಾವಿನ ಹೆಡೆಯಂತೆ ಎರಡೂ ಕಿವಿಗಳನ್ನು ಬಳಿಯಿಸುತ್ತಿದ್ದವು: ಕೆಲವು ಸಲ ಅವು ಕಣಕಟ್ಟಿದ ತಿಂಗಳಿನ ನೆನಹು ತಂದೊಡ್ಡುತ್ತಿದ್ದರೆ ಮತ್ತೆ ಹಲವು ಸಲ ಹಿಮಾಲಯ ಪರ್ವತಗಳ ರಾಶಿ ಗಳಂತೆ ತಗ್ಗು ಉಬ್ಬುಗಳು ಎದುರಿನಲ್ಲಿ ಎದ್ದು ನಿಲ್ಲುತ್ತಿದ್ದವು. ಕೂದಲನ್ನು ಶೃಂಗರಿಸುವದರಲ್ಲಿ ಆಕೆ ಇಷ್ಟೊಂದು ಜಾಣ್ಮೆ ತೋರಿಸುತ್ತಿದ್ದಳು. ಆಕೆ ಈ ಕಲೆಯನ್ನು ಯಾರನ್ನೂ ನೋಡಿ ಕಲಿತಿಲ್ಲ: ಆಕೆಯದೇ ಆದ ಕಲೆಯದು; ಆಕೆಯ ಜಾಣ್ಮೆಯೆಲ್ಲ ತಲೆಯಲ್ಲಿರದೆ ಕೂದಲುಗಳಲ್ಲಿರುವಂತೆ ಅವನಿಗೆ ಭಾಸವಾಗುತ್ತಿತ್ತು ............ ...

ನೃತ್ಯವು ಭರದಿಂದ ಮತ್ತೆ ನಡೆಯಿತು. ಆಕೆಯ ಮುಂಗುರುಳುಗಳು ಮೃದುವಾಗಿ ಅವನ ಗಲ್ಲಗಳಿಗೆ ತಾಗುತ್ತಿದ್ದವು, ಅವನ ರೋಮರೋಮ ಗಳಲ್ಲಿ ನೃತ್ಯದ ಹುಚ್ಚು ಸೇರಿ ಹೋಗಿತ್ತು. ವಿಷಯಾಗ್ನಿಯಲ್ಲಿ ಅವನ ಮತ್ತು ಸ್ನೇಹಲತೆಯ ದೇಹಗಳು ಕರಗಿ ಒಂದಾಗಿದ್ದವು; ಗಾಳಿಗೆ ಹೊಯ್ದಾ ಡುವ ಜ್ಯೋತಿಯಂತೆ ಅವರು ತಾಳಕ್ಕೆ ಸರಿಯಾಗಿ ಕುಣಿದರು; ಜ್ಯೋತಿ!

ನಾಗರಹಾವು ! ಅಲೆ !.........ತೆರೆಗಳು.........ತೆರೆಗಳು............ಮೃದುವಾದ ಬಿಸಿಯಾದ ತೆರೆಗಳು ಒಯ್ಯೊಯ್ಯನೆ ಮೆಲುಧ್ವನಿಯಲ್ಲಿ ಜೋಗುಳ ಹಾಡುತ್ತ ಉಸುಗಿನ ಕಡಲದಂಡೆಯನ್ನು ಮುತ್ತಿಡುತ್ತವೆ: ಪ್ರಿಯೆ ! ನಿದ್ರಿಸು; ಮಲಗು; ಸಾವು ಬಾಳಿನ ಸಾರವು ! ಅಲುಗಾಡ ಬೇಡ; ಸಟನೆ ಬೇಡ; ಏನನ್ನೂ ಚಿಂತಿಸ ಬೇಡ; ಶಾಂತತೆಯು ಬಾಳಿನ ಸಾರವು ! ಸ್ವಾತಂತ್ರ್ಯಕ್ಕಾಗಿ ಕಳವಳ ಬೇಡ; ಆ ವಿಚಾರ ಒತ್ತಟ್ಟಿಗಿರಲಿ; ದಾಸ್ಯವೇ ಬಾಳಿನ ತಿರುಳು !

ನೃತ್ಯದ ಮುಂದಿರವ ವಾತಾವರಣವನ್ನೆಲ್ಲ ಮಧುರವಾದ ಹಾಲಾಹಲವು ಆವರಿಸಿಬಿಟ್ಟಿತು................ಸೆರೆಯಲ್ಲಿ ಹಾಲಾಹಲ............ಸಂಗೀತದಲ್ಲಿ ಹಾಲಾಹಲ............ಹೆಣ್ಣಿನಲ್ಲಿ ಹಾಲಾಹಲ............ಹಾಲಾಹಲ ! ನಿದ್ರೆ ! ಅರ್ಧ ತೆರೆದ ಸ್ನೇಹಲತೆಯ ತುಟಿಗಳು ಮೋಹಕವಾಗಿದ್ದವು.........ಅದರಂತೆ ಹಾಲಾಹಲವು ತುಂಬಿದ ಮಂಜುಳ ಗಾನವೂ ಮೋಹಕವಾಗಿತ್ತು. ಪ್ರಿಯೇ ! ಹೋಗು ನಿದ್ರಿಸು; ಮಲಗು; ಮಲಗು; ಅನಂತಕಾಲದವರೆಗೆ ಮಲಗಿ ಬಿಡು !............ ಒಮ್ಮೆಲೇ ದೀಪಗಳು ಆರಿದವು; ಇಬ್ಬರ ತುಟಿಗಳು ಒಂದ ಕ್ಕೊಂದು ಕೂಡಿದವು; ದೇಹಗಳು ತಕ್ಕೈಸಿದವು; ಮೃದುವಾಗಿ ಮೆಲ್ಲ ಮೆಲ್ಲನೆ, ಸಂಗೀತದ ಉಯ್ಯಾಲೆಯಲ್ಲಿ ತಲ್ಲೀನನಾಗಿ ಬಿದ್ದು ಬಿಟ್ಟನು; ಅನಂತತೆ ಯಲ್ಲಿ ಲೀನನಾದನು; ಮುಳುಗಿಯೇ ಬಿಟ್ಟನು; ಗಾಢನಿದ್ರೆ ಹತ್ತಿತು; ಸತ್ತು ಬಿಟ್ಟನು

---

## ಮೂರನೆಯ ಭಾಗ

# ಸಜೀವ ಮನುಷ್ಯ

ಸತ್ತಿರುವೆನೆಯೋ ?..............ಬದುಕಿರುವೆನೇ ?.........ಬಿತ್ತರವಾದ ಬಾಂದಳದಲ್ಲಿ ನನ್ನ ಕುರುಡು ಕಣ್ಣುಗಳು ಏನನ್ನು ಅರಸುತ್ತಲಿವೆ ?

ಕುಳಿತುಕೊಳ್ಳಿ ! ಇಲ್ಲಿಯೇ ದರಬಾರಿನ ಪಾವಟಿಗೆಗಳ ಮೇಲೆ ಕುಳಿತು ಕೊಳ್ಳಿ ! ಪೋಲಿಸರಾಗಲೀ, ಸೇವಾ ಸಮಿತಿಯವರಾಗಲೀ ಅಂಜುಮಾನ ಖುದ್ದಾಮುಲ ಮುಸ್ಲೀಮೀನದವರಾಗಲೀ ನನ್ನ ದೇಹವನ್ನು ತಕ್ಕೊಂಡು ಹೋಗಿ ಹುಗಿದು ಇಲ್ಲವೆ ಸುಟ್ಟುಬಿಡುವ ಮೊದಲು ನನ್ನ ಕತೆಯನ್ನಷ್ಟು ಹೇಳಿಬಿಡುತ್ತೇನೆ; ಕೇಳಿರಿ.

ಓಕರಿಕೆ ಬಂದು, ಅಸಹ್ಯತೆಯಿಂದ ಮುಖವನ್ನು ತಿರುಗಿಸಬೇಡಿ; ನಾನೂ ನಿಮ್ಮಂತೆ ಒಬ್ಬ ಮನುಷ್ಯನಾಗಿದ್ದೇನೆ - ನಾನೂ ಒಬ್ಬ ರಕ್ತ, ಮಾಂಸ ಎಲುವುಗಳಿಂದ ನಿರ್ಮಿತವಾದ ಜೀವಿ ! ಆದರೆ ಈಗ ನನ್ನ ದೇಹದಲ್ಲಿ ಇಂದು ಮಾಂಸಕ್ಕಿಂತ ಎಲುವುಗಳೇ ಹೆಚ್ಚಾಗಿರುವವೆಂಬುದೇನೋ ನಿಜ; ನನ್ನ ಸ್ನಾಯುಗಳು ಕೊಳೆಯುತ್ತ ನಡೆದಿವೆ: ದುರ್ಗಂಧವು ಹರಡುತ್ತಲಿದೆ. ಅನಾರೋಗ್ಯಕರವಾದ ವಾಸನೆಯು ಹೊರಡುತ್ತಲಿದೆ. ಅದರಲ್ಲಾವ ಸೋಜಿಗದ ವಿಷಯವಿಲ್ಲ; ಅದೊಂದು ರಸಾಯನ ಕ್ರಿಯೆ. ನನ್ನ ಮತ್ತು ನಿಮ್ಮ ದೇಹಗಳಲ್ಲಿ ಭೇದ ಬಹಳವಿಲ್ಲ. ಎಷ್ಟೋ ದಿನಗಳ ಉಪವಾಸದ ಪರಿಣಾಮವಾಗಿ, ನನ್ನ ಹೃದಯದ ಬಡಿತ ನಿಂತುಹೋಗಿವೆ. ಮೆದುಳು ಕಾರ್ಯ ಮಾಡುತ್ತಿಲ್ಲ. ಹೊಟ್ಟೆಯೇ ಒಳ ಸೇರಿ ಗೂಡುಗಟ್ಟಿದೆ. ನಾನು ಸತ್ತಿದ್ದರೂ ಇನ್ನೂ ಹಸಿವೆ ಹಿಂಗಿಲ್ಲ; ಒಂದು ಅಗಳು ಅನ್ನವನ್ನು ನನ್ನ ಹೊಟ್ಟೆಯಲ್ಲಿ ಹಾಕಿ ನೋಡಿರಿ; ನನ್ನ ಹೋದ ಜೀವವು ಮತ್ತೆ ತಿರುಗಿ ಬರುವದು; ಮೊದಲಿನಂತೆ ಬಾಳು ಮೊದಲಾಗುತ್ತದೆ. ನನ್ನ ಮಾತಿನಲ್ಲಿ ನಂಬುಗೆ ಸಾಲದಿದ್ದರೆ

ಪರೀಕ್ಷಿಸಿಯಾದರೂ .ನೋಡಿರಿ! ಎಲ್ಲಿ ಹೊರಟಿರಿ? ಅಣ್ಣಗಳಿರಾ, ಒಂದಿನಿತು ನಿಲ್ಲಿರಿ; ಹೋಗಬೇಡಿರಿ; ಏನೋ ಒಂದಿನಿತು ಹಾಸ್ಯ ಮಾಡಿದೆ. 'ಸತ್ತವರೂ ಬಿಕ್ಷೆ ಬೇಡುವರಲ್ಲಾ' ಎಂದು ನೀವು ಹೆದರಿದಂತೆ ಕಾಣುತ್ತದೆ. !

ದಯವಿಟ್ಟು ಹೋಗಬೇಡಿರಿ; ನನ್ನ ಕತೆ ಆಲಿಸಿರಿ; ಅಕ್ಕಿಯ ಕಾಳನ್ನು ಆದರ ಪಾಲಿಗೆ ಬಿಟ್ಟು ಬಿಡಿರಿ. ಅದನ್ನು ಗಟ್ಟಿಯಾಗಿ ನಿಮ್ಮ ಮಂಗಮುಷ್ಟಿ ಯಲ್ಲಿಯೇ ಹಿಡಿದುಕೊಂಡು ಬಿಡಿರಿ; ನಾನು ಈಗ ಅನ್ನವನ್ನು ಬೇಡುವದಿಲ್ಲ' ನನ್ನ ದೇಹವು ಕೊಳೆಯುತ್ತ ನಡೆದಿದೆ. ಅದಕ್ಕೆ ಅಕ್ಕಿಯ ಕಾಳಿನ ಅವಶ್ಯಕತೆ ಉಳಿದಿಲ್ಲ. ಈ ದೇಹವೇ ಇಷ್ಟರಲ್ಲಿ ಅಕ್ಕಿಯ ಕಾಳೇ ಆಗಿ ಬಿಡುವದು. ದೇಹವು ಮಿದುವಾದ ಬಿಸಿ ಮಣ್ಣಿನೊಂದಿಗೆ ಸೇರಿ ಒಂದಾಗಿ ಬಿಡುವದು. ಅದ ರಲ್ಲಿ ಭತ್ತವನ್ನು ನೆಟ್ಟರೆ ಅದು ಮೊಳಕೆಯೊಡೆಯುತ್ತದೆ; ಕೆಲವೇ ದಿನಗಳಲ್ಲಿ ಪೈರು ತಲೆಯೆತ್ತಿ, ತೆಳ್ಳಗೆ ನೀರುಬಿಟ್ಟ ಗದ್ದೆಗಳಲ್ಲಿ ಶೋಭಿಸುವದು. ಹಚ್ಚಗೆ ಹಸಿರು ಮೆರೆಯುತ್ತ ತಂಗಾಳಿಗೆ ತಲೆದೂಗುವದು. ಒಣಗಿದ ಪೈರು ನಸುನಗುತ್ತ ಬಿಸಿಯಾದ ರವಿರಶ್ಮಿಗಳೊಂದಿಗೆ ಚಿನ್ನಾಟವಾಡಿ ಬೆಳದಿಂಗಳ ತಂಪು ತುಂತರ ಗಳಲ್ಲಿ ಮಿಂದು ಪಕ್ಷಿಗಳ ಮಂಜುಳ ಗಾನವನ್ನು ಆಲಿಸುತ್ತ ನಿಂತಾಗ, ಒಯ್ಯೊ-ಯ್ಯನೆ ಮೆಲ್ಲಡಿಯಿಡುತ್ತ ಸುಳಿಗಾಳಿ ಸಾಗಿಬಂದು, ಅದನ್ನು ಮುತ್ತಿಡುವದು. ಒಂದೊಂದು ಭತ್ತದ ಕಾಳಿನಿಂದ, ನವಸೌಂದರ್ಯ, ನವಗಾಯನ, ನವ-ಜೀವನಗಳು ಮೊದಲಾಗುತ್ತವೆ. ಒಂದೇ ಒಂದು ಅಕ್ಕಿಯ ಕಾಳಿನಿಂದ ಇಷ್ಟೆಲ್ಲ ಸಾಧಿಸುವದು! ಅಹುದು ಅದೇ ಅಕ್ಕಿಯ ಕಾಳಿನಿಂದಲೇ! ಹೊದಿಕೆ ಯಲ್ಲಿಯ ಸುಂದರವಾದ ಮುತ್ತಿನಂತೆ, ಹೊನ್ನವರ್ಣದ ಕವಚದಲ್ಲಿ ಅಡಗಿರುವ ಶುಭ್ರವಾದ ಒಂದೇ ಒಂದು ಅಕ್ಕಿಯ ಕಾಳಿನಿಂದ................

ನಾನೊಂದು ಗುಟ್ಟನ್ನು ನಿಮ್ಮಲ್ಲಿ ರಟ್ಟು ಮಾಡುತ್ತಿದ್ದೇನೆ. ಅದುವೇ ಬಾಳಿನ ಗುಟ್ಟು, ಸತ್ತವರಿಗೆ ಮಾತ್ರ ಆ ಗುಟ್ಟು ಗೊತ್ತು! 'ಮಾನವನನ್ನಾಗಿ ನಿರ್ಮಿಸಬೇಡ; ಅಕ್ಕಿಯ ಕಾಳಾಗಿ ನನ್ನನ್ನು ಹುಟ್ಟಿಸೆ'ಂದು ಪ್ರತಿಯೊಬ್ಬನು ದೇವರನ್ನು ಪ್ರಾರ್ಥಿಸುವದೇ ಆ ಗುಟ್ಟು! ತಪಸ್ಸು ಮಾಡಿರಿ; ಅಡ್ಡ ಬೀಳಿರಿ; ಸೆರಗೊಡ್ಡಿ ಪ್ರಾರ್ಥಿಸಿರಿ; ಏನಾದರೂ ಮಾಡಿ ಸೃಷ್ಟಿಕರ್ತೃವಿನ ಮನವೊಲಿಸಿ ಕೊಂಡು ಮುಂದಿನ ಜನ್ಮದಲ್ಲಿ ಮಾನವನ ಬದಲು ಅಕ್ಕಿಯ ಕಾಳನ್ನಾಗಿ ಹುಟ್ಟಿಸೆಂದು ಬೇಡಿಕೊಳ್ಳಿರಿ. ಮಾನವನಲ್ಲಿ ಜೀವವಿದೆ; ಅಕ್ಕಿಯ ಕಾಳಿನಲ್ಲಿಯೂ

ಜೀವವಿದೆ.ಆದರೆ ಅಕ್ಕಿಯ ಕಾಳಿನಲ್ಲಿಯ ಜೀವ ಖಂಡಿತವಾಗಿಯೂ ಹೆಚ್ಚು ಶ್ರೇಷ್ಠ ತರಗತಿಯದು; ಮತ್ತು ಪರಿಶುದ್ಧವಾದುದು; ಆ ಜೀವ ಪಾಪರಹಿತ-ವಾಗಿದೆ; ಸೌಂದರ್ಯಯುಕ್ತವಾಗಿದೆ. ಮಾನವ ಜೀವಕ್ಕೂ ಇದರಲ್ಲಿಯ ಜೀವಕ್ಕೂ ಎಷ್ಟು ಅಂತರ! ಮಾನವನ ನಿಜವಾದ ಧನವೆಂದರೆ ಅವನ ದೇಹ ವಲ್ಲ; ಮನೆಯಲ್ಲ; ದುಡ್ಡಲ್ಲ; ಅವನ ನಿಜವಾದ ಧನವೆಂದರೆ ಅವನ ಬಾಳು— ಅವನ ಆತ್ಮ! ತನು, ಮಣ್ಣು, ಧನಗಳು ಅವನು ಜೀವಂತನಾಗಿರುವತನಕ ಮಾತ್ರ ಉಪಯೋಗ ಬೀಳುತ್ತವೆ; ಸತ್ತಮೇಲೆ ಮಾನವನು ಅವುಗಳನ್ನು ಇಲ್ಲಿಯೇ ಬಿಟ್ಟು ಹೋಗುತ್ತಾನೆ. ಹೃದಯದಲ್ಲಿ ಕೆಲವು ಪಡಿರೂಪಗಳು, ನೆನ-ಹುಗಳು, ದಾವಾನಲದ ಜ್ವಾಲೆಗಳು, ನಕ್ಕುನಲಿದ ಪ್ರಸಂಗಗಳು ಅಚ್ಚೊತ್ತಿ ನಿಂತಿರುತ್ತವೆ. ಮಾನವನ ಬಾಳೇ ಅವುಗಳ ಮೇಲೆ ನಿಂತಿದೆ; ಸತ್ತಮೇಲೆ ಹಿಂಬಾಲಿಸುವವು ಅವುಗಳೇ ಹೊರತು ಬೇರೆಯವುಗಳಲ್ಲ.

ಅಕ್ಕಿಯ ಕಾಳಿನ ಚರಿತೆಯನ್ನು ಕೇಳಿದಿರಿ. ನನ್ನದಷ್ಟನ್ನು ಹೇಳುವೆ; ಅಸಹ್ಯತೆಯಿಂದ ಮುಖ ತಿರುಗಿಸಬೇಡಿರಿ. ನನ್ನ ದೇಹದಲ್ಲಿ ಜೀವವಿಲ್ಲ; ಆದರೂ ಆತ್ಮ ಇನ್ನೂ ಜಾಗೃತವಾಗಿಯೇ ಇದೆ. ಅದೂ ಸಹಿತ ಮುಗ್ಗಿ ಮರುಟಿ ಹೋಗುವದರೊಳಗಾಗಿ ದೇಹ ಮತ್ತು ಆತ್ಮಗಳು ಒಂದಾಗಿ ನಕ್ಕು, ನಲಿದಾಡಿ, ಚಿನ್ನಾಟಗೈದ ದಿನಗಳ ಕತೆಯನ್ನು ಹೇಳುತ್ತೇನೆ; ಕೇಳಿರಿ.

ದೇಹ ಮತ್ತು ಆತ್ಮ! ಅವೆರಡೂ ಒಂದಕ್ಕೊಂದು ಒಂದಿಕೊಂಡಿರು ವಾಗಲೇ ನೆಮ್ಮದಿ; ಕಾರ್ಯಪ್ರಾರಂಭ; ನಿರ್ಮಾಣಗಳು ತೋರಿಬರುತ್ತಲಿವೆ. ಮಣ್ಣು ನೀರುಗಳು ಕೂಡಿದಾಗ ಭತ್ತ ಬೆಳೆಯುತ್ತವೆ. ಗಂಡುಹೆಣ್ಣು ಸಂಧೀ ಸಿದರೆ ನಗುಮೊಗದ ಮಗು ಜನಿಸುತ್ತದೆ; ದೇಹ ಆತ್ಮಗಳು ಒಂದಾಗಿರುವದೇ ಜೀವನ! ಬನ್ನಿ! ಅನಂತ ಕಾಲದ ವರೆಗೆ ಅಗಲಿಹೋದ ನಮ್ಮಿಬ್ಬರ ಕತೆ ಯನ್ನು ಹೇಳುತ್ತೇನೆ! ದೇಹ ಮತ್ತು ಆತ್ಮ— ಇವೆರಡರಲ್ಲಿ ಅಂತರವಿಷ್ಟೇ! ದೇಹವು ನಾಶನಾದರೆ ದುರ್ಗಂಧ ವಾಸನೆ ಬರುತ್ತದೆ. ಆತ್ಮ ನಾಶವಾದರೆ ಬರಿಯ ಹೊಗೆ ಮಾತ್ರ ಹೊರಡುವದು. ಆ ಹೊರಡುವ ಹೊಗೆಯನ್ನು ಲಕ್ಷಪೂರ್ವಕವಾಗಿ ದಿಟ್ಟಿಸಿರಿ. ಅದರಲ್ಲಿ ನನ್ನ ಹಿಂದಿನ ದಿನಗಳ ಚಿತ್ರಗಳನ್ನು ಕಾಣಬಹುದು – ಕೆಲವು ಚಿತ್ರಗಳಲ್ಲಿ ಕಂಪನವಿದೆ; ಕೆಲವು ಪ್ರಜ್ವಲಿಸುತ್ತವೆ. ಇನ್ನುಳಿದವು ಬಾಡಿವೆ............ಅದಾವ ಮಿಂಚಿನ ಸೆಳಕದು ?..........ಅದು ನನ್ನ ಹೆಂಡತಿಯ ಮುಗುಳು ನಗೆ...........ಅಹುದು; ಆಕೆಯೆ ನನ್ನ ಹೆಂಡತಿ....

ಚಿನ್ನ! ನಾಚಬೇಡ; ಹೊರಗೆ ಬಾ !.......... ಈಗ ಆಕೆ ಸರಿಯಾಗಿ ಕಾಣಿಸು-ವಳಲ್ಲವೇ ? ಮುಗ್ಧ ಸೌಂದರ್ಯವತಿಯಾಕೆ; ಆಕೆಯ ನಿಡಿದಾಗ ಉಂಗುರು-ಗೂದಲುಗಳು ಗಾಳಿಯೊಂದಿಗೆ ತೇಲುತ್ತ ನಡೆದಿವೆ; ಲಜ್ಜೆ ಬೆರೆತ ಮುಗುಳುನಗೆ ಆಕೆಗೊಂದು ಆಭರಣವಿದ್ದಂತೆ; ಆಕೆ ಚಂಚಲಳಾದ ವಿನಯಾಂಗನೆ !........ ಅತಪರವು ಒಂದು ಹಳ್ಳಿ; ಅದು ಕಡಲುದಂಡೆಯ ಮೇಲಿತ್ತು; ಅದೊಂದು ಮೀನಗಾರರ ಬೀಡಾರ; ಮೂರು ವರುಷಗಳ ಕೆಳಗೆ ನಾನು ಅಲ್ಲಿಗೆ ರಜೆಪಡೆದು ನನ್ನ ಅತ್ತೆಯನ್ನು ಕಾಣಲಿಕ್ಕೆ ಹೋಗಿದ್ದೆ; ಅದೊಂದು ಪ್ರಶಾಂತವಾದ ಹಳ್ಳಿ; ಕಡಲ ಅಂಚಿನಲ್ಲಿ ಶಾಂತವಾಗಿ ಮಲಗಿದಂತಿತ್ತು. ಸುತ್ತಲೂ ತಾಳೆಯ ಮರ ಗಳು; ಬಿದುರ ಬೆತ್ತಗಳು, ಬಾಳೆಯ ಬನಗಳು ನಿಂತಿದ್ದವು; ಆದರೆ ಅವೆಲ್ಲ ಈಗ ನೋಡಲಿಕ್ಕೆ ಸಿಕ್ಕುವದಿಲ್ಲ; ಹಳ್ಳಿಯೇ ಹಾಳು ಬಿದ್ದಿದೆ; ಅಲ್ಲಿ ಇಂದು ಮಸಣಶಾಂತಿ ನೆಲೆನಿಂತಿದೆ; ಆಗ ನಾನು ಅಜತ ಜಮೀನದಾರರ ಮಗಳಿಗೆ ಸಿತಾರ ಪಾಠಗಳನ್ನು ಹೇಳುತ್ತಿದ್ದೆ; ಜಮೀನದಾರರಿಂದ ಎರಡು ದಿನ ರಜೆ ಪಡೆದುಕೊಂಡು ಹಳ್ಳಿಗೆ ಹೋದಾಗ ಅಲ್ಲಿಯೇ ಈ ಹುಡಿಗೆಯನ್ನು ಮೊದಲು ನೋಡಿದ್ದು.

ನಮ್ಮ ಬಂಗಾಲದ ಹಳ್ಳಿಗಳಲ್ಲಿ ಏಕೆ ಈತೆರನಾದ ದುಃಖ ಹುದುಗಿದೆಯೋ ನನಗಂತೂ ತಿಳಿಯದಾಗಿದೆ. ಬಂಗಾಲದ ಭೂದೇವಿ ಮೌನಿಯಾಗಿದ್ದಾಳೆ; ಬಂಗಾಲದ ಬಿತ್ತರವಾದ ಕಡಲು ಗಂಭೀರವಾಗಿ, ಶಾಂತಚಿತ್ತವಾಗಿ ಮಲಗಿ ಬಿಟ್ಟಿದೆ ಬಿದುರಿನಿಂದ ನಿರ್ಮಿತವಾದ ಗುಡಿಸಲುಗಳಲ್ಲಿ ಅಜ್ಞಾನವು ತುಂಬಿ-ಹೋಗಿದೆ—ಎಲ್ಲೆಲ್ಲಿಯೂ ಕತ್ತಲೆ ! ಆಕ್ರಮಣ ! ಅಜ್ಞಾನ !! ತುಳಿತ !! ಕೊಳೆತ ಮೀನಗಳ ದುರ್ಗಂಧ, ವಾತಾವರಣವನ್ನೆಲ್ಲ ಆವರಿಸಿಬಿಟ್ಟಿದೆ. ಹಳ್ಳಿಯ ಹೊಂಡಕೆರೆಗಳಲ್ಲಿ ಅಂತರಗಂಗೆ ನಿಂತುಬಿಟ್ಟಿದೆ. ಭತ್ತದ ಗದ್ದೆಗಳಲ್ಲಿ ಸಾಕಷ್ಟು ನೀರಿಲ್ಲ; ಎತ್ತರವಾದ ತಾಳೆಯ ಮರಗಳು ಒಂಟಿಯಾಗಿ ನಿಂತುಕೊಂಡು ಬಾನಹೃದಯವನ್ನು ಬಡಿಯುತ್ತಿವೆ. ಎಲ್ಲೆಡೆಯಲ್ಲಿಯೂ, ಸದಾಕಾಲದಲ್ಲಿ, ಸಹಿಸಲಸಾಧ್ಯವಾದ ದುಃಖ, ಭೀಕರ ಮೌನ, ಜಾಡ್ಯದ ದೌರ್ಬಲ್ಯ, ಸಾವು ನೋವುಗಳೇ ಕಂಡುಬರುತ್ತವೆ. ನಲ್ಲನಲ್ಲೆಯರ ನಿತ್ಯದ ಒಡನಾಟದಲ್ಲಿ, ಸಾಮಾಜಿಕ ಕಾರ್ಯಗಳಲ್ಲಿ, ಸಾಹಿತ್ಯದಲ್ಲಿ, ಸಂಗೀತದಲ್ಲಿ ಈ ನೋವಿನ ಹಿರಿಧ್ವನಿ ಸ್ಪಷ್ಟವಾಗಿ ಕೇಳಿಬರುತ್ತದೆ; ಇದರ ಮೂಲ ಹಳ್ಳಿಗಳಲ್ಲಿ; ನಂತರ ಎಲ್ಲ ಕಡೆಗೂ ಪಸರಿಸಿದೆ

ಮೊದಲುಸಲ ನಾನು ಆಕೆಯನ್ನು ಕಂಡಾಗ ಆಕೆ ನನಗೆ ದೇವಕನ್ಯೆಯಂತೆ ಸುಂದರಳಾಗಿ ಕಂಡಳು. ಆದಾವುದೋ ರಾಗ ನನ್ನ ತಲೆಯಲ್ಲಿ ಗುಣುಗುಡುತ್ತಲಿತ್ತಾಗ! ಆಕೆ ಸಾಗರದಲ್ಲಿ ಈಜುತ್ತಿದ್ದಳು. ದಂಡೆಯ ಉಸುಕಿನಲ್ಲಿ ಮೆಲ್ಲಡಿಯಿಡುತ್ತ ನಡೆದಿದ್ದೆ. ಒಮ್ಮೆಲೇ ಮಂಜುಳ ಧ್ವನಿ ತೇಲಿಬಂತು.

"ದೂರ ಹೋಗು! ನಾನು ಹೊರಗೆ ಬರುತ್ತೇನೆ" ಸಾಗರದ ಕಡೆಗೆ ದಿಟ್ಟಿಸಿದೆ. ಥಳಥಳಿಸುವ ಕಪ್ಪುಗೂದಲುಗಳು! ನಗುಮೊಗದ ಝಗಝಗಿಸುವ ಮುಖ! ದೂರದಲ್ಲಿ ಆಗಸವು ಕಡಲನ್ನು ಚುಂಬಿಸುವೆಡೆಯಲ್ಲಿ ಬಿಳಿಯ ಡೋಣಿಯೊಂದು ಬಿಸಿಲಿನಲ್ಲಿ ಬೆಳ್ಳಿಯ ತಗಡಿನಂತೆ ಶೋಭಿಸಿತು.

ನಾನು ಕೇಳಿದೆ

"ನೀನು ಏಳು ಕಡಲುಗಳಾಚೆಯಿಂದ ಬಂದೆಯಾ?"

ಆಕೆ ನಕ್ಕಳು

"ಇಲ್ಲ; ನಾನು ಇದೇ ಹಳ್ಳಿಯವಳು; ಅದು ನನ್ನ ತಂದೆಯ ಡೋಣಿ; ಅವನು ಮೀನ ಹಿಡಿಯುತ್ತಿದ್ದಾನೆ. ಅವನಿಗೆ ಅನ್ನ ತಂದಿದ್ದೇನೆ.........ಎಲ್ಲಿ ಹೊರಟಿ? ನೋಡು! ತಾಳೆಯ ಮರದಡಿಯಲ್ಲಿ ಅನ್ನದ ಗಂಟನ್ನಿಟ್ಟಿದ್ದೇನೆ. ನನ್ನ ಸೀರೆಯೂ ಅಲ್ಲಿಯೇ ಇದೆ"

ಆಕೆ ನೀರಿನಲ್ಲಿ ಮುಳಗಿದಳು. ಬೆಳ್ಳಿಯಂತೆ ಬೆಳ್ಳಗಾದ ಗುಳ್ಳೆಗಳು 'ಗುಳುಗುಳು' ಸಪ್ಪಳ ಮಾಡುತ್ತ ಎದ್ದವು; ದಂಡೆಯ ಕಡೆಗೆ ಈಜುತ್ತ ಬಂದಳು

"ದಯವಿಟ್ಟು, ಮರೆಯಾಗು; ನನ್ನ ಸೀರೆಯನ್ನಷ್ಟು ಕೊಡುತ್ತೀಯಾ?"

"ಒಂದು ಕರಾರಿನ ಮೇಲೆ;"

"ಯಾವ ಕರಾರು?"

"ನನಗೂ ಹಸಿವೆ ಬಹಳವಾಗಿದೆ; ಮೀನ ಮತ್ತು ಅನ್ನ ಕೊಡಬೇಕು"

ಆಕೆ ಒಮ್ಮೆಲೇ ಘೊಳ್ಳೆಂದು ನಕ್ಕಳು; ಬಿಟ್ಟಬಾಣದಂತೆ ಒಮ್ಮೆಲೇ ನೇಸರಿನ ಕಿರಣಗಳಿಂದ ಥಳಥಳಿಸಿ ಹೊಳೆಯುತ್ತ ಸಿಂಗರಗೊಂಡ ನೀಲಕಡಲಿನಲ್ಲಿ ಧುಮುಕಿದಳು.

ಮತ್ತೆ ದಂಡೆಯ ಕಡೆಗೆ ಈಜುತ್ತ ಬಂದಳು. ಈ ಸಲ ವೇಗವಿರಲಿಲ್ಲ. ಮೆಲ್ಲಮೆಲ್ಲನೆ, ಮಗುವಿನಂತೆ ಚಿನ್ನಾಟಗೈಯುತ ಬಂದಳು.

“ ಏನಂದಿ ?...........” ನಾನು ಕೇಳಿದೆ.

“ ಅಕ್ಕಿ ತುಟ್ಟಿಯಾಗಿದೆ; ರೂಪಾಯಿಗೆ ಎರಡೇ ಸೇರು ! ನಿನಗೆ ತಿನ್ನಲಿಕ್ಕೆ ಕೊಡುವದು ಸಾಧ್ಯವಿಲ್ಲ ”

“ ಹಾಗಾದರೆ ಏನು ತಿನ್ನಲಿ ? ನಾನು...........”

“ ಸಾಗರದ ಉಪ್ಪುನೀರು ಕುಡಿ ”

ಅಣಕವಾಡಿ ಮತ್ತೆ ಕಡಲಿನಲ್ಲಿ ಜಿಗಿದುಬಿಟ್ಟಳಾಕೆ !

ಮದುವಣಗಿತ್ತಿಯಾಗಿ ಆಕೆ ನನ್ನ ಮನೆಗೆ ಬಂದಾಗ ಅಕ್ಕಿ ರೂಪಾಯಿಗೆ ಎರಡು ಸೇರು ಸಿಕ್ಕುತ್ತಿತ್ತು. ನನಗೆ ಆಗ ತಿಂಗಳಿಗೆ ಐವತ್ತು ರೂಪಾಯಿಗಳ ವೇತನ; ಮದುವೆಯಾಗುವ ಮೊದಲು ನಿತ್ಯ ನಸುಕಿನಲಿ ಎದ್ದು, ನನ್ನ ಕೈಯಿಂದಲೇ ಅಡಿಗೆ ಮಾಡಿಕೊಳ್ಳುತ್ತಿದೆ. ಜಮೀನದಾರರ ಮಗಳು ಮುಂಜಾನೆ ಶಾಲೆಗೆ ಹೋಗುತ್ತಿದ್ದಳು. ಆಕೆಗೆ ಶಾಲೆಗೆ ಹೋಗುವದರೊಳಗಾಗಿಯೇ ಸಿತಾರಪಾಠಗಳನ್ನು ಹೇಳಬೇಕಾಗಿತ್ತು. ಸಂಜೆಯ ಮುಂದೆ ಮತ್ತೆ ಎರಡು ತಾಸು ಪಾಠ ಹೇಳುತ್ತಿದ್ದೆ; ಮಧ್ಯದಲ್ಲಿ, ಜಮೀನದಾರರು ತಮಗೆ ಬೇಕಾದಾಗ ನನ್ನನ್ನು ಕರೆಯಿಸಿ ಅಪ್ಪಣೆ ಕೊಡಿಸುತ್ತಿದ್ದರು.

“ ಏನನ್ನಾದರೂ ಬಾರಿಸು; ನನಗೇಕೋ ಬೇಜಾರಾಗಿದೆ ”

ಕೆಲ ದಿನಗಳಲ್ಲಿಯೇ ಈ ನಮ್ಮ ಮಗು ಜನಿಸಿತು...............ಮಗು ! ಬಾ ! ಇಲ್ಲಿ ಬಾ............ನಗು........ಇವರನ್ನು ನಗಿಸು; ಹೇಳು ಇವರಿಗೆ ಹೇಳು;

“ ನಾನು ನಿರಪರಾಧಿಯಾಗಿದ್ದೇನೆ; ಮದುವೆಯಾಗಿದ್ದೇನೆ; ಇನ್ನೂ ಸರಿಯಾಗಿ ಎರಡು ವರುಷಗಳು ತುಂಬಿಲ್ಲ; ಗಿಲಗಂಜಿ, ಗೊಂಬೆಗಳೊಂದಿಗೆ ಆಡುವದು, ತಾಯಿಯ ಮೊಲೆಗಳನ್ನು ಜೀಪುವದು, ತಾಯಿಯ ತೊಡೆಯ ಮೇಲೆ ಮಲಗುವದು ನನಗೆ ಸೇರುತ್ತವೆ; ನಿಜವಾಗಿಯೂ ನಾನು ಮುಗುದೆ ! ಇನ್ನೂ ನನಗೆ ಸರಿಯಾಗಿ ಮಾತು ಬಾರವು; ನನ್ನ ಮುದ್ದಾದ ಬಾಲಲೀಲೆಗಳಿಂದ, ನಕ್ಕು ನಲಿದು, ಕತ್ತಲೆ ತುಂಬಿದ ನನ್ನ ತಂದೆ-ತಾಯಿಗಳ ಗುಡಿಸ

ಲನ್ನು ಶೋಭಿಸುವದಕ್ಕಾಗಿ ದೇವರಿಂದ ಕಳುಹಿಸಲ್ಪಟ್ಟಿದ್ದೇನೆ; ಆಗಸದ ಕಡೆಗೆ ಆಗಾಗ ನೋಡುತ್ತೇನೆ.................”

ಹೂಂ! ಬಾ, ಮಗು; ಹೆದರಬೇಡ, ಬಾ! ನಗು; ಇವರನ್ನೂ ನಗಿಸು......... .. ....

ಈ ಕೂಸು ಹುಟ್ಟಿದಾಗ ಅಕ್ಕಿ ರೂಪಾಯಿಗೆ ಒಂದು ಸೇರಾಗಿತ್ತು: ಆದರೂ ಅಕ್ಕಿಯ ಕಾಳುಗಳನ್ನು ನಿರ್ಮಿಸಿದ ದೇವನನ್ನು ಕೊಂಡಾಡುತ್ತಲೇ ಇದ್ದೆವು; ಅಕ್ಕಿಯನ್ನು ಪೂರೈಸುತ್ತಿದ್ದ ಜಮೀನದಾರರ ಪಾದಗಳನ್ನು ಚುಂಬಿಸುತ್ತಲಿದ್ದೆವು; ಬೆಳೆಯುವವರ ಮತ್ತು ತಿನ್ನುವವರ ಒಡನಾಟದಲ್ಲಿಯೇ ಯಾವತ್ತೂ ಮಾನವ ಉತ್ಕ್ರಾಂತಿಯ ಚರಿತೆ, ಸಂಸ್ಕೃತಿ, ನಾಗರಿಕತೆ, ಧರ್ಮ, ತತ್ವಜ್ಞಾನ, ಸಾಹಿತ್ಯಗಳು ಅಡಕವಾಗಿವೆ: ಉತ್ಪಾದನೆ ಮತ್ತು ವಿನಿಯೋಗ! ಬರೀಯ ಎರಡು ಸಾಮಾನ್ಯ ಶಬ್ದಗಳು; ಆದರೆ ಅವೆರಡರಲ್ಲಿ ಅಡಗಿದ್ದ ಅಂತರವನ್ನು ಗಮನಿಸಿದ್ದಿರಾ?

ರೂಪಾಯಿಗೆ ಒಂದೇ ಸೇರು ಅಕ್ಕಿ!

ಅಕ್ಕಿ ರೂಪಾಯಿಗೆ ಮುಕ್ಕಾಲು ಸೇರಾಯಿತು.

ಅರ್ಧ ಸೇರಾಯಿತು ಅಕ್ಕಿ ರೂಪಾಯಿಗೆ;

ಕಾಲು ಸೇರಾಯಿತು!

ನಂತರ — ಅಕ್ಕಿ ಕ್ರಮೇಣ ಕಾಣದಾಯಿತು!

ಗಿಡಗಳಿಂದ ಹಣ್ಣುಗಳು ಮಾಯವಾದವು; ಕಾಯಿಪಲ್ಲೆಗಳು ಅದೃಶ್ಯವಾದವು; ಮೀನಗಳು ಸಿಕ್ಕದಂತಾದವು. ಟೆಂಗಿನ ಕಾಯಿಗಳು ಕಾಣದಾದವು. ಜಮೀನದಾರರಲ್ಲಿಯೂ ಬನಿಯಾ ಜನರಲ್ಲಿಯೂ ಟನ್ನಗಟ್ಟಲೆ ಅಕ್ಕಿ ಇತ್ತೆಂದು ಹೇಳುತ್ತಿದ್ದರು. ಆದರೆ ಅಕ್ಕಿ ಎಲ್ಲಿ? ಯಾರಿಗೂ ತಿಳಿಯಲಿಲ್ಲ. ಒಂದಿನಿತು ಅಕ್ಕಿಯನ್ನು ದೊರಕಿಸುವದಕ್ಕಾಗಿ ಭಗೀರಥ ಯತ್ನ ನಡೆಸಿದ್ದಾಯಿತು. ಬೇಡಿಕೊಂಡದ್ದಾಯಿತು; ಪ್ರಾರ್ಥಿಸಿದ್ದಾಯಿತು; ದೇವರನ್ನು ಪ್ರಾರ್ಥಿಸಿದೆವು. ಹಲವರು ಹುಟ್ಟಿಸಿದ ದೇಹವನ್ನು ಶಪಿಸಿದರು. ಮಾಡಬೇಕಾದುದೆಲ್ಲವನು ಮಾಡಿದೆವು. ಆದರೆ ಎಲ್ಲವೂ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತಾಯಿತ್ತು ಎಲ್ಲವೂ ಹಾಳಾದವು; ಉಳಿದವುಗಳೆಂದರೆ ಜನರ ಬಾಯಲ್ಲಿ ದೇವರ ನಾಮಾವಳಿಗಳು; ಮತ್ತು ಪಟ್ಟಣಗಳಲ್ಲಿ ಬನಿಯಾಗಳ ಬಂಗಲೆಗಳು!

ಜಮೀನುದಾರರು ಸಿತಾರ ಪಾಠಗಳನ್ನೆಲ್ಲ ನಿಲ್ಲಿಸಿದರು. ಉಪವಾಸ ದಿಂದ ಬಳಲುತ್ತಿರುವಾಗ ಸಂಗೀತ ಯಾರಿಗೆ ಬೇಕಾದೀತು! ಸಿತಾರವನ್ನು ನುಡಿಸುವದಕ್ಕೆ ಐವತ್ತು ರೂಪಾಯಿಗಳನ್ನು ಯಾರು ಕೊಡುತ್ತಾರೆ?

ಹಸಿವು! ನಿರಾಶೆ! ಚಟಪಡಿಸುವ ಕೂಸು!! ನಾನು ಆಕೆಗೆ ಸೂಚಿಸಿದೆ.

"ಕಲಕತ್ತೆಗೆ ಹೋಗೋಣ; ಲಕ್ಷಗಟ್ಟಲೆ ಜನರಿದ್ದಾರೆ; ಅಲ್ಲಿ ನನಗೆ ಕೆಲಸ ಸಿಕ್ಕರೂ ಸಿಗಬಹುದು"

"ಕಲಕತ್ತೆಗೆ ಹೋಗೋಣ!"

"ನಾವೂ ಕಲಕತ್ತೆಗೆ ಹೋಗೋಣ!!"

ಹಳ್ಳಿಯ ಜನರೆಲ್ಲರೂ ಒಂದೇ ನಿರ್ಣಯಕ್ಕೆ ಬಂದಂತಿತ್ತು. ಇಷ್ಟು ದಿನಗಳವರೆಗೆ ಕಲಕತ್ತೆಯ ಕಡೆಗೆ ನುಗ್ಗಬೇಕೆಂದಿದ್ದ ಪ್ರವಾಹವನ್ನು ಅದಾವುದೋ ಒಂದು ಒಡ್ಡು ತಡೆದು ನಿಲ್ಲಿಸಿತ್ತು. "ಕಲಕತ್ತೆಗೆ ಹೋಗೋಣ"ವೆಂಬ ಕೂಗು ಅದರಲ್ಲಿ ಒಂದು ತೂತು ಮಾಡಿತು, ಜನರು ಆ ತೂತಿನೊಳಗಿಂದ ಪ್ರವಾಹಪತಿತರಾಗಿ ತೇಲಿ ನಡೆದರು. ಎಲ್ಲರ ಬಾಯಲ್ಲಿಯೂ ಅದೇ ನುಡಿ.

"ಕಲಕತ್ತೆಗೆ!"

"ಕಲಕತ್ತೆಗೆ!!"

"ಕಲಕತ್ತೆಗೆ!!!"

ಹಳ್ಳಿಪಳ್ಳಿಗಳಿಂದ ಸಾಗಿ ಕಲಕತ್ತೆಯನ್ನು ಬಂದು ಸೇರುವ ಕರ್ಮ ಮಾರ್ಗದಲ್ಲಿ ಅವರೆಲ್ಲ ನಡೆದರು; ಮಾನವತ್ವದ ಹೊನಲಿಗೆ ಕೊಂಡೊಯ್ಯುವ ಒಂದೇ ಒಂದಾದ ಜೀವನ ಮಾರ್ಗವಾಗಿ ಅದು ಅವರಿಗೆ ತೋರಿತ್ತು. ಅಂತೆಯೇ ಅದೇ ಮಾರ್ಗದಲ್ಲಿ ಅವರೆಲ್ಲ ನಡೆದಿದ್ದರು.

"ಕಲಕತ್ತೆಗೆ!"

"ಕಲಕತ್ತೆಗೆ!!"

ಇರುವೆಗಳ ತಂಡ ಅನ್ನಾನ್ವೇಷಣೆಗಾಗಿ ಕಲಕತ್ತೆಗೆ ನಡೆದಿತ್ತು; ಮೃತ್ಯುವಿನ ತಂಡ..................ಮೇಲೆ ಆಗಸದಲ್ಲಿ ಹದ್ದುಗಳು ಹಾರಾಡುತ್ತಿದ್ದವು. ಅವುಗಳಿಗೇನೂ ಆಹಾರದ ಕೊರತೆಯಿರಲಿಲ್ಲ... ........ಅಡಿಗಡಿಗೆ ಮಾಂಸದ

ವಾಸನೆ, ನರಳುವ ಹೆಂಗಸರ ಧ್ವನಿ, ಕಿರುಚುವ ಬಾಲಕರ ಗೋಳಾಟಗಳು ಕೇಳಿಬರುತ್ತಿದ್ದವು. ಪ್ಲೇಗು ಬಂದು ಸಾಯುವ ಇಲಿಗಳಂತೆ ದೇಹಗಳು ಬೀದಿಯ ಬದಿಯಲ್ಲಿ ಸತ್ತು ಬೀಳುತ್ತಿದ್ದವು; ಅವುಗಳನ್ನು ಹದ್ದು, ಕಾಗೆ, ನಾಯಿ, ನರಿಗಳು ಹರಿದುಕೊಂಡು ತಿನ್ನುತ್ತಿದ್ದವು. ಆದರೂ ಇರುವೆಗಳ ತಂಡ ಮುನ್ನಡದೇ ಇತ್ತು. ಬಂಗಾಲದ ಮೂಲೆ ಮೂಲೆಗಳಿಂದ ಅವರು ಬಂದಿದ್ದರು; ಅವರೆಲ್ಲ ಕಲಕತ್ತೆಗೇನೇ ಹೊರಟಿದ್ದರು. ಕಲಕತ್ತೆಗೇನೇ ! ಕಲಕತ್ತೆಗೇನೇ !!

ಯಾರು ನೆರವೀಯುವರು ? ಯಾವ ರೀತಿಯಲ್ಲಿ ? ಎಲ್ಲರೂ ಅತಿ ಹೀನರಾಗಿದ್ದರು. ಅವರಿದ್ದುದು ಕೀಳುತನದ ಕೊನೆಯ ಮೆಟ್ಟಲಿನಲ್ಲಿ, ಕ್ರೂರತನ, ನಿರಾಶೆ, ಆತ್ಮಸಂರಕ್ಷಣೆಗಳಿಗೇ ಅವರೆಲ್ಲರು ಅಂಟಿಕೊಂಡಿದ್ದರು. ಹಸಿವು ! ನಿರಾಶೆ !! ಸಾವು !!! ಜರ್ಜರಗೊಂಡು ಕೃಶವಾದ ದೇಹಗಳನ್ನು ಹೊತ್ತುಕೊಂಡು ಭಾರವಾದ ಹೆಜ್ಜೆಗಳನ್ನಿಕ್ಕುತ್ತ ಮಾನವ ಕೀಟಕಗಳು ನಡೆದಿದ್ದವು. ಹಲವರು ತಮ್ಮತಮ್ಮಲ್ಲಿ ಕಾದಾಡುತ್ತಿದ್ದರೆ, ಮತ್ತೆ ಕೆಲವರು ಬಿಕ್ಕಿ ಬಿಕ್ಕಿ ನಿರ್ವೀರ್ಯರಾಗಿ ಅಳುತ್ತಿದ್ದರು. ಇನ್ನಿತರರು ರಕ್ತಕಾರಿ ಕೆಮ್ಮಿ ಸಾಯುತ್ತಿದ್ದರು; ಇರುವೆಗಳಲ್ಲಿರುವಷ್ಟಾದರೂ ಶಿಸ್ತು, ಸಂಯಮನಗಳು ಅವರಿಗಿದ್ದಿದ್ದರೆ ? ಇರುವೆ, ಇಲಿಗಳು ಸಹಿತ ಇಷ್ಟೊಂದು ಭಯಂಕರವಾಗಿ ಸಾಯುವದಿಲ್ಲ......................

ದಾರಿಯಲ್ಲಿ ಅಲ್ಲಲ್ಲಿ ದಾನ ದೊರೆಯುತ್ತಿತ್ತು; ಅಲ್ಪದಾನ ಯಾವ ಸಮಸ್ಯೆಯನ್ನೂ ಪೂರ್ತಿ ಮಾಡಲಾರದು. ಆ ದಾನದಿಂದ ತೆರಳುವ ಪ್ರಾಣ ತಡೆದು ನಿಲ್ಲುವದಿಲ್ಲ; ಮೇಲಾಗಿ ಅದರಿಂದ ವಂಚನೆಯೇ ಹೆಚ್ಚಾಗುವದು ! ಅಲ್ಪದಾನ ಕೊಡುವವನನ್ನೂ, ತೆಗೆದುಕೊಳ್ಳುವವನನ್ನೂ ಕೂಡಿಯೇ ಮೋಸಗೊಳಿಸುತ್ತಿದೆ !

ನಮಗೂ ಆಗಾಗ ಭಿಕ್ಷೆ ದೊರೆಯುತ್ತಿತ್ತು; ಒಂದು ದಿನ ಇಡೀಯ ಟೆಂಗಿನಕಾಯಿ ದೊರೆಯಿತು; ಕೂಸು ಹಾಲಿಗ್ಗಾಗಿ ಎಷ್ಟೋ ದಿನಗಳಿಂದ ಕಿರುಚುತ್ತಿತ್ತು. ಆದರೆ ತಾಯಿಯ ಎದೆಯು, ಹಲವು ವರ್ಷಗಳಿಂದ ಒಂದನಿ ಮಳೆ ಬೀಳದೆ ಒಣಗಿಹೋದ ಭೂಮಿಯಂತೆ ಒಣಗಿ ಬಿಟ್ಟಿತ್ತು;

ಆಕೆಯ ದೇಹ ಬತ್ತಿದ ಹೂವನ್ನು ನೆನಪಿಗೆ ತಂದುಕೊಡುತ್ತಿತ್ತು. ಮಗುವನ್ನು ಸಂತೈಸುವದಕ್ಕೆಂದು ಆಕೆ ಅದರ ಕೈಯಲ್ಲಿ ಗಿಲಗಂಚಿಯನ್ನು ಕೊಟ್ಟಿದ್ದಳು. ಆ ಕಟ್ಟಿಗೆಯ ಆಟಿಗೆಯೆಂದರೆ ಮಗುವಿಗೆ ತುಂಬಾ ಮಮತೆ! ತನ್ನ ಪುಟ್ಟ ಮುಷ್ಟಿಯಲ್ಲಿ ಅದನ್ನು ಭದ್ರವಾಗಿ ಹಿಡಿದುಕೊಂಡಿರುತ್ತಿದ್ದಳಾಕೆ! ಆ ದಿವಸ ಕೈಯಲ್ಲಿ ಆಟಿಗೆಯಿತ್ತು; ಕೂಸು ತಾಯಿಯ ಕೊಂಕಳಲ್ಲಿ ಅವಿತುಕೊಂಡು, ಹೌಹಾರಿ ಗಾಯಗೊಂಡ ಪ್ರಾಣಿಯಂತೆ ಚಟಪಡಿಸುತ್ತಿತ್ತು; ಸಾವೊಂದೇ ಆ ಕೂಸನ್ನು ರಮಿಸಬಹುದಾಗಿತ್ತಾಗ!........ಅಂದೇ ಒಂದು ಟೆಂಗಿನಕಾಯಿ ದೊರೆಯಿತು; ಹಾಲನ್ನು ಮಗುವಿಗೆ ಕುಡಿಸಿ ಕೊಬ್ಬರಿಯನ್ನು ನಾವು ತಿಂದೆವು; ಕ್ಷಣಹೊತ್ತು ಇಡೀಯ ವಿಶ್ವವೇ ಮತ್ತೆ ಹುಟ್ಟಿ ಬಂದಂತೆನಿಸಿತು.

" ಕಲಕತ್ತೆಗೆ ! ಕಲಕತ್ತೆಗೆ !! "

ನಾವಿನ್ನೂ ಆ ಅನಂತವಾದ ಮಾರ್ಗದಲ್ಲಿದ್ದೆವು. ಪಯಣಿಗರಲ್ಲಿ ಏನೂ ಉಳಿದಿರಲಿಲ್ಲ; ಹತ್ತಿರವಿದ್ದ ವಸ್ತುಗಳಲ್ಲಿ ಕೆಲವನ್ನು ಮಾರಿದ್ದರು; ಕೆಲವನ್ನು ಅದಲು ಬದಲು ಮಾಡಿದ್ದರು; ಬರಿಯ ದೇಹಗಳ ಮಾರಾಟ ಮಾಡುವದಷ್ಟು ಉಳಿದಿತ್ತು. ಉತ್ತರ ಹಿಂದುಸ್ತಾನದಿಂದ ಕೊಳ್ಳಲಿಕ್ಕೆಂದು ಜನರು ಬಂದಿದ್ದರು. ಅವರಲ್ಲಿ 'ವಿಧವಾಶ್ರಮ' ಮತ್ತು 'ಅನಾಥಾಶ್ರಮ'ಗಳ ಮೇಲ್ವಿಚಾರಕರೂ ಇದ್ದರು. ಅವರು ಬರೀಯ ವಿಧವೆ ಮತ್ತು ಅನಾಥರನ್ನಷ್ಟೇ ಆರಿಸುತ್ತಿದ್ದರು. ತಮ್ಮ ಮಕ್ಕಳುಗಳನ್ನು ತಂದೆ-ತಾಯಿಗಳೇ ಕೊಟ್ಟು ಅನಾಥರನ್ನಾಗಿ ಮಾಡುತ್ತಿದ್ದರು. ತಂದೆ-ತಾಯಿಗಳು ಬದುಕಿದ್ದುದು ಅಷ್ಟೊಂದು ಮಹತ್ವದ ಮಾತಾಗಿರಲಿಲ್ಲ. ದಾರಿದ್ರ್ಯವೇ ಅವರನ್ನು ಅನಾಥರನ್ನಾಗಿ ಮಾಡುತ್ತಿತ್ತು! ಅವರಲ್ಲಿ ಎಷ್ಟೋ ಅನುಭವಿಕ ಮಾನವ ಮಾಂಸದ ವ್ಯಾಪಾರಿಗಳಿದ್ದರು. ನೈತಿಕ, ಧಾರ್ಮಿಕ, ಸಾಮಾಜಿಕ ಕಟ್ಟಳೆಗಳ ಹೆದರಿಕೆಗಳೊಂದೂ ಅವರಿಗಿರಲಿಲ್ಲ. ದನ ಕುರಿಗಳನ್ನು ಪೇಟೆಯಲ್ಲಿ ಆರಿಸುವಂತೆ ಹುಡಿಗೆಯರನ್ನು ಆರಿಸುತ್ತಿದ್ದರು,

" ಪರವಾಯಿಲ್ಲ; ಮೈತುಂಬಿಕೊಂಡಿದ್ದಾಳೆ "

" ಕೊಂಚ ಕಪ್ಪು ! "

" ತೀರ ಕಡ್ಡಿಯಾಗಿದ್ದಾಳೆ "

" ಗಾಯದ ಕಲೆಯಿದೆ. "

" ಬರೀಯ ಎಲುವುಗಳೇ ! ಮಾಂಸವೇ ವರ್ಜ್ಯ !! "

" ಏನೇ ಆಗಲಿ, ಈಕೆ ನಡೆಯಬಹುದು "

" ಹತ್ತೇ ರೂಪಾಯಿಗಳು—ಹೆಚ್ಚಿಗಿಲ್ಲ "

ಗಂಡಂದಿರು ಹೆಂಡಂದಿರನ್ನು ಮಾರುತ್ತಿದ್ದರು. ಮಾತೆಯರು ಮಕ್ಕಳನ್ನು ಮಾರುತ್ತಿದ್ದರು. ಸಹೋದರರು, ಸಹೋದರಿಯರನ್ನು ಮಾರುತ್ತಿದ್ದರು. ನಿರ್ಗತಿಕರಾಗುವ ಮೊದಲು ಅವರನ್ನೆಲ್ಲ ಕೊಂದು ವೇಶ್ಯಾವೃತ್ತಿಯ ವ್ಯಾಪಾರವನ್ನು ಕಡಿಮೆ ಮಾಡಬಹುದಾಗಿತ್ತು; ಅಂಥ ಉಚ್ಚ ವಿಚಾರ ಒತ್ತಟ್ಟಿಗಿರಲಿ; ಹೆಣ್ಣುಮಕ್ಕಳನ್ನು ಖಿನ್ನರಾಗಿ ಅನಿವಾರ್ಯವೆಂದು ಮಾರುತ್ತಿರಲಿಲ್ಲ; ಹೇಗಾದರೂ ಮಾಡಿ ತಮ್ಮ ಸಾಮಾನುಗಳನ್ನು ಇನ್ನೊಬ್ಬರಿಗೆ ಎಪ್ಪೆಹಾಕಿಬಿಡುವ ಹೀನ ವ್ಯಾಪಾರಸ್ಥರಂತೆ, ಕೊಳ್ಳಲು ಬಂದವರ ಮುಖಸ್ತುತಿ ಮಾಡಿ, ಒಂದೊಂದು ಪೈಗೂ ಜಗಳ ಮಾಡುತ್ತಿದ್ದರು. ಧರ್ಮ, ನೀತಿ, ಆಧ್ಯಾತ್ಮಕತೆ, ಮಾತೃತ್ವ ಮೊದಲಾದ ಮಾನವತೆಯ ಭಾವನೆಗಳನ್ನು ಹುಟ್ಟಿಸುವ ಎಷ್ಟೋ ಆದರ್ಶಗಳು ಎಲ್ಲಿಯೋ ಮಾಯವಾಗಿ ಬಿಟ್ಟಿದ್ದವು. ಕಾಡಿನಲ್ಲಿಯ ಕ್ರೂರ ಪಶುಗಳಂತೆ, ಮಾನವನ ಬಾಳೂ ಪಶುತ್ವಕ್ಕಿಳಿದಿತ್ತು; ಹಸಿವು, ರಕ್ತಶೋಷಣೆ, ಕ್ರೂರತನ, ಭೀಕರತೆಗಳೇ ಮಾನವ ಜೀವಿತದ ನಿತ್ಯದ ಮಾತಾಗಿದ್ದವು.

" ನಮ್ಮ ಮಗಳನ್ನೂ ಮಾರೋಣ " ನನ್ನ ಹೆಂಡತಿ ಸೂಚಿಸಿದಳು. ಅಂಜಿ, ನಾಚಿ, ಮುಖವನ್ನು ಕೆಳಗೆ ಹಾಕಿ, ನೆಲವನ್ನೇ ದಿಟ್ಟಿಸುತ್ತ ಅಷ್ಟು ಹೇಳಿ, ಮಾತು ಮುಗಿಯುವ ಮೊದಲೇ ಮೌನಳಾಗಿ ಬಿಟ್ಟಳು; ತನ್ನ ನುಡಿಯಿಂದ ಗಂಡನೆಷ್ಟು ನೊಂದುಕೊಳ್ಳುವನೆಂದು ನೋಡಬೇಕೆಂದು ಆಕೆ ನನ್ನ ಕಡೆಗೆ ಕಡೆಗಣ್ಣಿನಿಂದ ನೋಡಿದಳು; ನಾನೂ ಆಕೆಯನ್ನು ದಿಟ್ಟಿಸಿದೆ; ಆಕೆ ಅಪರಾಧಿನಿಯಂತೆ ತೋರಿದಳು; ಆಕೆಯ ಕಂಗಳಲ್ಲಿ, ಸ್ವಂತ ಗರ್ಭದಲ್ಲಿ ಬೆಳೆದ ಕೂಸನ್ನು ಕತ್ತು ಹಿಚಿಕಿ ಕೊಂದ, ಪತಿಯನ್ನು ಬಲವಾಗಿ ಬೆನ್ನಮೇಲೆ ಚಪ್ಪರಿಸಿದ. ತನ್ನ ಕುತ್ತಿಗೆಗೇನೇ ನೇಣು ಹಾಕಿಕೊಂಡ ಅಪರಾಧದ ಸುಳಿವು ಮೂಡಿತ್ತು !

ಆಕೆ ಸತ್ತಿದ್ದಾಳೆ; ಆದುದರಿಂದ ಧೈರ್ಯವಾಗಿ ಹೀಗೆ ಮಾತಾಡುವದಿಲ್ಲ; 'ನಾವೂ ನಮ್ಮ ಮಕ್ಕಳನ್ನು ಮಾರೋಣ' ವೆಂದಾಗಲೇ ಆಕೆ ನಿಜವಾಗಿ ಸತ್ತಿದ್ದಳು. ಆ ಮೊದಲೇ ಸತ್ತಿದ್ದರೂ ಸತ್ತಿರಬೇಕು; ನಾನು ಸತ್ತಿದ್ದೇನೆ—ಅಂದಿನಿಂದ ಇಂಗಿನ ವರೆಗೆ, ಸತ್ತ ಮೇಲೂ ವಿಚಾರಿಸುತ್ತಿದ್ದೇವೆ; ಅಂದು ಆಕೆಯ ಬಾಯಿಂದ ಈ ನುಡಿಗಳು ಹೇಗೆ ಬಂದುವೆಂಬುದು ತಿಳಿಯದಾಗಿದೆ. ಮಾತೃತ್ವವನ್ನು ನಾಶಮಾಡಿ, ಆತ್ಮವನ್ನು ಜಜ್ಜಿಬಿಟ್ಟ ಆ ಶಕ್ತಿಯೆಷ್ಟು ಉಗ್ರವಾಗಿರಬೇಕು! ಆಕೆಯ ಕೊಂಕುಳೊಳಗಿಂದ ಕೂಸನ್ನು ಎಳೆದುಕೊಂಡು, ಸಿಟ್ಟಿನಿಂದ ದುರುದುರನೇ ಆಕೆಯನ್ನು ನೋಡಿದ್ದು ನನಗಿನ್ನೂ ನೆನಪಿನಲ್ಲಿದೆ. ಆ ನನ್ನ ಕೋಪ, ರುಧ್ರತೆಗಳು ಆಕೆಯ ಮೇಲೆ ಯಾವ ಪರಿಣಾಮವನ್ನೂ ಮಾಡಿದಂತೆ ತೋರಲಿಲ್ಲ. ಅಂಥಳಂಶೆ ನನ್ನ ಹಿಂದೆ ಯಾಂತ್ರಿಕವೆಂಬಂತೆ ನಡೆದಿದ್ದಳು.

ಆಕೆಯ ಕೇಶರಾಶಿಯೆಲ್ಲ ಧೂಳದಿಂದ ಮಲಿನವಾಗಿತ್ತು! ಸೀರೆ ಕೊಳಕಾಗಿತ್ತು; ಹರಿದಿತ್ತು; ಬಲಗಾಲಿನಲ್ಲಿ ರಕ್ತ ಚಿಮ್ಮುತ್ತಿತ್ತು; ಕಣ್ಣುಗಳು............ ಮೂರು ವರುಷಗಳ ಕಡಲಕನ್ನೆ!..........ಅಂದು ಮೊದಲು ಕಡಲಿನಲ್ಲಿ ಆಕೆ ಈಜುವಾಗ ಕಂಡ ಮಧುರ ಮನೋಹರಳಾದ..........ಭಂಗಾರದ ಬಣ್ಣದ ಮೀನದಂತಿದ್ದ..........ಕಡಲಕನ್ನೆ ಎಲ್ಲಿ ಮಾಯವಾದಳು?............... ಆಕೆಯ ಅಂದಿನ ಸೌಂದರ್ಯ ಅಪೂರ್ವವಾಗಿತ್ತು; ತಾಜಮಹಾಲಿನ ಗಾಂಭೀರ್ಯ, ಎಲ್ಲೂರಿನ ಮೋಹಕತೆ, ಅಶೋಕನ ಶಿಲಾಶಾಸನಗಳ ಅನಂತತೆಗಳು ಆಕೆಯಲ್ಲಿ ಒಬ್ಬುಳಿಗೂಡಿದ್ದವು. ಆದರೆ ಇಂದು ಅವೆಲ್ಲ ಎಲ್ಲಿಗೆ ಹೋದವು? ಆ ಸೌಂದರ್ಯ, ಆ ಆತ್ಮ. ಆ ಶ್ರೇಷ್ಠ ತಾಯಿತನಗಳು, ತುಳಿತದಲ್ಲಿ ಸಿಕ್ಕು, ನುಗ್ಗಾಗಿ ಗುರುತಿಸಲು ಬಾರದಂತಾದ ಹೆಣದಲ್ಲಿ ದೂಳದಲ್ಲೇಕೆ ಬೀಳುತ್ತಿತ್ತು?..........ಹೆಣ್ಣು ದೇವಿಯೆಂದು ಹೇಳುತ್ತಾರೆ ನಂಬುಗೆಯ ಸಾಕ್ಷಾತ್ ಮೂರುತಿಯೆಂದು ಹೇಳುತ್ತಾರೆ: ಅದು ನಿಜ! ಅವಳು ನನ್ನ ಬಾಳಿನ ಸತ್ಯದೇವತೆ! ನನ್ನ ಬಾಳಿನ ಸರ್ವಸ್ವ! ಹೆಣ್ಣಿನಲ್ಲಿಯ ನಂಬುಗೆ, ಸತ್ಯ, ದೇವತ್ವಗಳಿಂದು ಅಕ್ಕಿಯ ಕಾಳುಗಳಾಗಿ ಜನಿಸಬೇಕಾಗಿದೆ; ಅಕ್ಕಿಯ ಕಾಳಿಲ್ಲದಿದ್ದರೆ ಏನೂ ಉಳಿಯುವದಿಲ್ಲ.

ಕಡಲಕನ್ನೆ ನನ್ನ ತೊಡೆಗಳ ಮೇಲೆ ತನ್ನ ತಲೆಯಿರಿಸಿ, ಕೊನೆಯುಸಿರು ಬಿಟ್ಟಳು; ಆಗ ತುಂಬಾ ದಣಿದಿದ್ದಳಾಕೆ! ಧೂಳದಿಂದ ಆಕೆಯ ದೇಹವೆಲ್ಲ

ಮಲಿನವಾಗಿತ್ತು; ಬೀದಿಯಲ್ಲಿಯೇ ಆಕೆ ಮಲಗಿ ಅನಂತತೆಯ ನಿದ್ರೆಯಲ್ಲಿ ಮಗ್ನಳಾದಳು. ಸಾಯುವ ಮೊದಲು ಒಂದಿನಿತು ಸಮಯ ಆಕೆಯ ಬಾಯಿಂದ ಧ್ವನಿಯೇ ಹೊರಡಲಿಲ್ಲ. ನಂತರ ಬಿಕ್ಕಿ ಬಿಕ್ಕಿ ಅತ್ತಳು. ಮರುಕ್ಷಣದಲ್ಲಿ ದೇಹದಿಂದ ಪ್ರಾಣಪಕ್ಕಿ ಹಾರಿತು!

ನನಗಂತೂ ಏನೂ ತಿಳಿಯಲಿಲ್ಲ; ನನ್ನ ಮನಸ್ಸು ಮೂರು ವರುಷ ಹಿಂದಕ್ಕೋಡಿತು. ಮೊದಲು ಮುತ್ತಿಟ್ಟಾಗ ಆಕೆಯ ದೇಹವು, ಮಲ್ಲಿಗೆಯ ವಾಸನೆಯನ್ನು ಜ್ಞಾಪಕಕ್ಕೆ ತಂದುಕೊಟ್ಟಿತ್ತು; ಆಕೆ ಪ್ರಾಣ ಬಿಟ್ಟಕೂಡಲೇ ಅದೇ ವಾಸನೆಯು ಮತ್ತೆ ತೇಲಿಬಂತು. ಕಂಗಳು ನೀರಿನಿಂದ ತುಂಬಿದವು. ಎವೆಯಿಕ್ಕದೆ ಆಕೆಯ ನಿರ್ಜೀವ ತುಟಿಗಳನ್ನು ದಿಟ್ಟಿಸಿದೆ; ಕಣ್ಣೀರುಗಳು ಆಕೆಯ ತುಟಿ, ಕಣ್ಣು, ಗಲ್ಲಗಳನ್ನು ತೋಯ್ಸಿದವು; ನನ್ನ ತೊಡೆಗಳ ಮೇಲೆಯೇ ಆಕೆಯ ಪ್ರಾಣ ಹಾರಿತು! ಕಡಲಕನ್ನೆ, ಹಸಿದು, ನೀರಡಿಸಿ, ಮಲಿನಳಾಗಿ, ಹರಕು ಚಿಂದೆಯಲ್ಲಿ ಹತ್ತೊಂಭತ್ತನೆಯ ವರುಷದಲ್ಲಿಯೇ ಪ್ರಾಣ ಬಿಟ್ಟಳು; ಆಗ ಕಡಲಕನ್ನೆ ಮಾಟಗಾತಿಯಂತೆ ತೋರಿದಳು. ಸಾವಿಗಾಗಿ ನಾನು ದುಃಖಪಡುವದಿಲ್ಲ. ಒಡೆದುಹೋದ ಬಾಳನ್ನು ನೆನೆದು ಕಣ್ಣೀರಿಡುವದಿಲ್ಲ. ಏನನ್ನೂ ಆಶಿಸದೆ ಹಾಗೆಯೇ ಸಾಗಿಹೋದ ಬಾಳನ್ನು ನನ್ನಾಕೆಗಾಗಿಯೂ ದುಃಖಿಸುವದಿಲ್ಲ; ಆಗರೆ? ಆಕೆಗೆ ಇಂಥ ಸಾವು ಬರಬಾರದಾಗಿತ್ತು; ಈ ಲೋಕದ ಒಡೆಯರನ್ನು ಕೇಳುತ್ತೇನೆ. 'ಆಕೆಯ ಬಾಳು ಈ ರೀತಿಯಲ್ಲಿ ಕೊನೆಗೊಳ್ಳಲಿಕ್ಕೆ ಆಕೆ ಮಾಡಿದ ಅಪರಾಧವಾದರೂ ಏನು' ಎಂದು! ಲಕ್ಷಾಂತರ ಸಾಮಾನ್ಯ ಜನರು ಬಾಳಿನಲ್ಲಿ ಹೆಚ್ಚಿಗೇನನ್ನೂ ಬಯಸುವದಿಲ್ಲ; ಅವರಿಗೆ ಕೀರ್ತಿಯ ಲಾಲಸೆಯಿಲ್ಲ; ಧನದ ಆಶೆಯಿಲ್ಲ; ಸಾಮ್ರಾಜ್ಯದ ಹಂಬಲವಿಲ್ಲ; ಸಾಧುತ್ವದ ಕಲ್ಪನೆಯೂ ಕೂಡ ಅವರಿಗಿರುವದಿಲ್ಲ; ಆದರೂ ಅಲ್ಪ ಸುಖಗಳೂ ಅವರಿಗೆ ದೊರೆಯುವದಿಲ್ಲ; ಆಕೆಗೂ ದೊರೆಯಲಿಲ್ಲ. ಆಕೆ ಈ ರೀತಿ ಸಾಯಬೇಕಿತ್ತೇಕೆ? ಸಾಯುವದೇ ಆಗಿದ್ದರೆ, ತನ್ನ ಹಳ್ಳಿಯಲ್ಲಿ, ಕಡಲು ದಂಡೆಯ ಮೇಲೆ, ತಂಗಾಳಿಗೆ ತೂಗುವ ತಾಳೆಯ ಬನಗಳ ಮಧ್ಯದಲ್ಲಿ ಸಾಯಬೇಕಿತ್ತಲ್ಲ! ಈ ರೀತಿಯ ಭೀಕರ ಮೃತ್ಯುವಿಗೆ ಬಲಿಯಾಗಬೇಕೆಂದಿತ್ತೇ ಆಕೆಯ ಹಣೆಯಲ್ಲಿ?—ಸಹಸ್ರಾರು ಹೆಣಗಳ ಮಧ್ಯದಲ್ಲಿ; ಜೀವಂತರಾಗಿರುವವರ ಕೂಗಾಟದ ಕೋಲಾಹಲದಲ್ಲಿ, ದುಃಖದ

ಜಂಜಾಟದಲ್ಲಿ, ನಿರಾಶೆಯ ಮಬ್ಬಿನಲ್ಲಿ ಹಸಿದು ಬೊಗಳುವ ನಾಯಿಗಳ ನೆರವಿಯಲ್ಲಿ ಸಾಯಬೇಕಾಗಿತ್ತೇ ಆಕೆ ?

ಆಕೆಯನ್ನು ಹುಗಿಯಲೂ ಇಲ್ಲ. ಸುಡಲೂ ಇಲ್ಲ; ಮಾರ್ಗದ•ಒಂದು ಪಕ್ಕಕ್ಕೆ ಸರಿಸಿ, ಮಗುವನ್ನು ಎತ್ತಿಕೊಂಡು ಮುಂದೆ ನಡೆದೆನು.

ಕಲಕತ್ತೆ ಇನ್ನೂ ದೂರದಲ್ಲಿತ್ತು—ಎಷ್ಟೋ ದಿನಗಳಿಂದ ನನ್ನ ಕೂಸಿಗೆ ಹೊಟ್ಟೆಗಿರಲಿಲ್ಲ. ಆಗ ಮಗುವಿಗೆ ಅಳುವುದೂ ಸಾಧ್ಯವಾಗುತ್ತಿರಲಿಲ್ಲ. ಗಂಟಲದೊಳಗಿಂದ ಧ್ವನಿಯೇ ಹೊರಡುತ್ತಿರಲಿಲ್ಲ; ಆ ಪುಟ್ಟ ಕಡಲಕನ್ನೆ, ಕೈಯಲ್ಲಿ ಗಿಲಗಂಚಿಯನ್ನು ಹಿಡಿದುಕೊಂಡು, ನೀರ ಹೊರಗೆ ಹಾಕಿದ ಮೀನಿನಂತೆ ಪಕಪಕ ಬಾಯಿ ಬಿಡುತ್ತಿದ್ದಳು. ನಂದಿಹೋಗುವ ಜ್ಯೋತಿಯಂತೆ ಆಕೆಯ ಪ್ರಾಣ ನನ್ನೆದುರಿನಲ್ಲಿಯೇ ಹಾರಿ ಹೋಗುತ್ತಿತ್ತು ! ಏನು ಮಾಡುವುದಕ್ಕೂ ಸಾಧ್ಯವಿರಲಿಲ್ಲ. ಮಾರ್ಗವಿಡಿದು ಮುನ್ನಡೆಯುತ್ತಲಿದ್ದೆ.; ನನ್ನ ಮುಂದೆ, ಹಿಂದೆ, ಇಕ್ಕೆಲ್ಲಗಳಲ್ಲಿ ಬೇರೆ ಜನರೂ ಸಾಗಿದ್ದರು—ಮೃತ್ಯುವಿನ ಯಾತ್ರೆಯೇ ಸಾಗಿತ್ತು ! ಪ್ರತಿಯೊಬ್ಬರು ತಮ್ಮನ್ನೇ ಮರೆತು ಅದೇ ನಿರಾಶೆಯ ಕೊಳ್ಳದಲ್ಲಿ ಸಾಗಿದ್ದರು. ಪ್ರತಿಯೊಬ್ಬರ ಕಂಗಳಲ್ಲಿ, ಮುಖದ ಮೇಲೆ ಅದೇ ದುಃಖದ ನೆರಳು ಬಿದ್ದಿತ್ತು..................ಆಗಸದ ಕಡೆಗೆ ಮುಖ ಮಾಡಿ ಕೈ ಜೋಡಿಸಿ ಪ್ರಾರ್ಥಿಸಿದೆ.

"ಪರಮಾತ್ಮಾ ! ಸೃಷ್ಟಿಕರ್ತಾ ! ಈ ನಿರಪರಾಧಿ ಕೂಸಿನ ಕಡೆಗಷ್ಟು ನೋಡು !...............ಲೋಕನಾಥಾ ! ಅನ್ನದೇವಾ ! ನಿನ್ನ ಬಿತ್ತರವಾದ ಸಾಮ್ರಾಜ್ಯದಲ್ಲಿ ಈಕೆಗಾಗಿ ಒಂದು ಹನಿ ಹಾಲು, ಒಂದು ತುತ್ತು ಅನ್ನವಿಲ್ಲವೇ ?...............ನೋಡು ! ನೋಡು ! ಆಕೆಯ ಕಡೆಗಿನಿತು ನೋಡು ! ಒಣಗಿ ಬಾಡಿ ಹೋದ ಬಾಯನ್ನು ಹೇಗೆ ಬಿಡುತ್ತಾಳೆ ? ಹಸಿವೆಯ ಜಳಕ್ಕೆ ಆಕೆಯ ದೇಹ ಬೆಂದುಹೋಗಿದೆ;............ದೇವಾ ! ಮೃತ್ಯು ಅಂದವಾದುದೆಂದು ಹೇಳುತ್ತಾರೆ. ವಾಸ್ತವಿಕವಾಗಿಯೂ ಈ ಸಾವು ಅಂದವಾಗಿಲ್ಲ; ಈ ಚಿಕ್ಕ ಕೂಸು ಸುಖವಾಗಿ ಕಣ್ಣು ಮುಚ್ಚಬೇಕಾಗಿತ್ತು !............ಯಮಧರ್ಮರಾಯಾ ! ಇನ್ನೂ ಸರಿಯಾಗಿ ಅರಳದ ಮೊಗ್ಗೆಯನ್ನು ಏಕಿಂತು ಧೂಳದಲ್ಲಿ ತುಳಿಯುತ್ತಿದ್ದಿ ?............ಸೊಗಸಾದ ಕನಸು ಕೊನೆಗೊಳ್ಳುವ ಮೊದಲೇ ಏಕೆ............ಹೊಳೆಯುವ ಗುಳ್ಳೆಗಳ ಸಮೂಹ, ತೆರೆಗಳ ಮೇಲೆ ಚಂದದಿಂದ

ನಲಿಯುವ ಡೋಣಿ, ಸುಶ್ರಾವ್ಯ ಸಂಗೀತ; ತಾಳೆಯ ಜಗಗಳ ನೆರಳಿನಲ್ಲಿಯ ಮೊದಲು ಮುತ್ತು............ಅಯ್ಯೋ, ಕ್ರೂರಾ, ಅಂಥ ನಿರ್ದಯ ದೇವರೇ! ಎಲ್ಲವನ್ನು ಮರೆಯಿಸಿ ಬಿಡುವೆಯಾ?

ಪ್ರಾರ್ಥನೆಗಳು, ಬೈಗಳು ವ್ಯರ್ಥವಾದವು. ನನ್ನ ಕೂಸು ಸತ್ತಿತು. ಅಯ್ಯೋ! ಆ ಕೊನೆಯಗಳಿಗೆ ಎಷ್ಟು ಭೀಕರವಾಗಿತ್ತು! ಕಲ್ಲಿನಂತಿರುವ ನನ್ನ ನಿರ್ಜೀವ ಕಣ್ಣುಗಳನ್ನು ಕೇಳಿರಿ; ಕಂಡುದುದನ್ನು ಹೇಳುತ್ತವೆ. ಒಂದು ಹನಿ ಹಾಲಿಗಾಗಿ ಹಂಬಲಿಸಿ ಆಕೆ ಸತ್ತಳು—ಒಂದು ಹನಿ ಹಾಲು ಬಾನಿನಿಂದಾದರೂ ಹನುಕಲಿಲ್ಲ; ಭೂಮಿಯಿಂದಾದರೂ ನೆನೆಯಲಿಲ್ಲ. ನಿರ್ದಯ ಬಾನು! ನಿರ್ದಯ ಭೂಮಿ!!

ಕಠಿನ, ಕ್ರೂರ, ನಿರ್ದಯವಾದ ಆ ಬೀದಿ!...............

ಸಾಯುವದು ಇನ್ನೂ ಒಂದೆರಡು ನಿಮಿಷಗಳಿರುವಾಗ ನನ್ನ ಮಗಳು ತನ್ನ ಮೆಚ್ಚಿಗೆಯ ಗಿಲಗಂಜಿಯನ್ನು ನನಗೆ ಕೊಟ್ಟಳು ನೋಡಿರಿ; ನನ್ನ ಸತ್ತ ಕೈಗಳಲ್ಲಿ ಅದು ಇದೆ; ಆಕೆ ಸಾಯುವ ಮೊದಲು ನನಗೆ ಕೊಟ್ಟ ಕಾಣಿಕೆಯಿದು; ಇಲ್ಲ; ಆಕೆ ನನ್ನೆಲ್ಲ ಅಪರಾಧಗಳನ್ನು ಮನ್ನಿಸಿ ಈ ಕಾಣಿಕೆಯನ್ನು ಇತ್ತಿದ್ದಾಳೆ. ಇದು ಕಡಿಮೆ ಬೆಲೆಗೆ ಸಿಕ್ಕುವ ಕಟ್ಟಿಗೆಯ ಗಿಲಗಂಜಿ ಎಂಬುದೇನೋ ನಿಜ! ನನಗೆ ಪೂರ್ತಿ ವಿಶ್ವಾಸವಿದೆ; ಆಕೆ ಕ್ಲಿಯೊಪಾತ್ರಾ ಆಗಿದ್ದರೆ ತನ್ನ ವಾತ್ಸಲ್ಯವನ್ನರ್ಪಿಸುತ್ತಿದ್ದಳು; ಮಮುತಾಜ ಮಹಾಲಳಾಗಿದ್ದರೆ ತನ್ನ 'ತಾಜ'ವನ್ನು ದಯಪಾಲಿಸುತ್ತಿದ್ದಳು. ವ್ಹಿಕ್ಟೋರಿಯಾ ಮಹಾರಾಣಿಯಾಗಿದ್ದರೆ ತನ್ನ ಸಾಮ್ರಾಜ್ಯವನ್ನೇ ಕೊಡುತ್ತಿದ್ದಳು! ಆದರೆ ಆಕೆ ದರಿದ್ರಳಾದ ಪುಟ್ಟ ಹುಡಿಗೆ; ಆಕೆಯಲ್ಲಿ ಇದ್ದುದೆಂದರೆ ಕಟ್ಟಿಗೆಯ ಗಿಲಗಂಜಿಯೊಂದೇ! ಅದನ್ನೇ ಆಕೆ ತನ್ನ ನಿರ್ಗತಿಕ ತಂದೆಗೆ ಕೊಟ್ಟಳು. ಈ ಪುಟ್ಟ ಆಟಿಗೆಯನ್ನು ತಕ್ಕೊಂಡು ಜತನದಿಂದಿರಿಸಿಕೊಳ್ಳುವರಾರೂ ನಿಮ್ಮಲ್ಲಿಲ್ಲವೆ? ಅಲ್ಪ ತ್ಯಾಗವನ್ನೇ, ಹಿರಿದೆಂದು ಹೇಳಿಕೊಳ್ಳುವ ನೀವು, ಈ ಕಟ್ಟಿಗೆಯ ಗಿಲಗಂಜಿಯನ್ನು ತಕ್ಕೊಂಡು, ಒಂದಾನೊಂದು ಕಾಲಕ್ಕೆ ನನ್ನ ಆತ್ಮವು ನಿಮಗಾಗಿ ನಿರ್ಮಿಸಬಹುದಾದ ಮಾನವತ್ವದ ದೇಗುಲದಲ್ಲಿ ಇಡಿರಿ...........

ಕೊನೆಗೆ ಕಲಕತ್ತೆ ಬಂದಿತು! ಲೆಕ್ಕವಿಲ್ಲದಷ್ಟು ಜನರು ಉಪವಾಸದಿಂದಿರುವ, ಹಾಳಾದ ನಗರ! ಆತ್ಮರಹಿತ, ನಿರ್ದಯ ಕ್ರೂರ ಪಟ್ಟಣ!

ಅಭಯಸ್ಥಾನವಿಲ್ಲ; ಆಶ್ರಯವಿಲ್ಲ; ಒಂದು ತುತ್ತು ಅನ್ನವೂ ದೊರೆಯುವದಿಲ್ಲ. ಸಿಲ್ದಾ ನಿಲ್ದಾಣ, ಶ್ಯಾಮ ಬಝಾರ, ಬುರ್ರಾ ಬಝಾರ, ಹ್ಯಾರಿಸನ್ನ ಬೀದಿ, ಝಕರಿಯಾ ಬೀದಿ, 'ಬೊ' ಬಝಾರ, ಸೋನಾಗಚಿ ನ್ಯೂ ಮಾರ್ಕೆಟ, ಭವಾನಿಪುರ—ಎಲ್ಲಿಯೂ ಒಂದು ಅಕ್ಕಿಯ ಕಾಳು ಸಿಗಲಿಲ್ಲ! ಎಲ್ಲಿ ನೋಡಿದಲ್ಲೆಲ್ಲ ಜನರೇ ಜನರು!

ಉಪವಾಸಕ್ಕೆ ತುತ್ತಾದ ನಿರ್ಗತಿಕರು, ಸತ್ತು, ಭವ್ಯವಾದ ಹೋಟಲುಗಳ ಎದುರಿನಲ್ಲಿ ಬೀಳುತ್ತಿದ್ದರು. ನಾಯಿ ಮತ್ತು ಮನುಷ್ಯರು ಒಂದೇ ಹೊಲಸು ತುಂಬಿದ ಕುಂಡೆಯಲ್ಲಿ ಅನ್ನವನ್ನು ಅರಸುತ್ತಿದ್ದರು. ಒಂದು ತುತ್ತು ಎಂಜಲಕ್ಕಾಗಿ ನಾಯಿಗೂ ಮನುಷ್ಯರಿಗೂ ಜಗಳ ನಡೆಯುತ್ತಿತ್ತು: ದೊಡ್ಡದೊಂದು ಮೋಟಾರು ಮಿಂಚಿನಂತೆ ಮಾಯವಾಗಿ ಹೋಯಿತು; ಅದರಲ್ಲಿಯ ಜನರು ಗಹಗಹಿಸಿ ನಗುತ್ತಿದ್ದರು.

ಬತ್ತಲೆಯಾದ ಜನರ ಪಕ್ಕೆಲವುಗಳು ಕಬ್ಬಿಣದ ಸರಪಳಿಗಳಂತೆ ತೋರುತ್ತಿದ್ದವು. ಅವುಗಳಲ್ಲಿ ಆತ್ಮವೇಕೆ ಬಂಧಿಯಾಗಿರಬೇಕು? ಅದೂ ಹಾರಿ ಹೋಗಲಿ! ಭೀಕರವಾದ ಕಾರಾಗಾರದ ಬಾಗಿಲುಗಳನ್ನು ತೆರೆಯಿರಿ............ ಮತ್ತೊಂದು ಕಾರು ಮಿಂಚಿನಂತೆ ಸುಳಿದು ಹೋಯಿತು;

ಆತ್ಮದ ಗೋಳಾಟದ ಕಲ್ಪನೆಯ ಅರಿವು ದೇಹಕ್ಕಾಗುವದಿಲ್ಲ............ ತಾಯಂದಿರು ಸಾಯುತ್ತಾರೆ. ಮಕ್ಕಳು ಭಿಕ್ಷೆ ಬೇಡುತ್ತವೆ; ಹೆಂಡತಿಯು ಸಾಯುತ್ತಾಳೆ; ಗಂಡನು ಗೋಳಿಡುತ್ತಾನೆ—ರಿಕ್ಷಾದಲ್ಲಿಯ ಸಾಹೇಬನನ್ನು ಒಬ್ಬನು ಬಿಕ್ಷೆ ಬೇಡಿದನು. ಆ ತರುಣಿ ಬತ್ತಲೆಯಾಗಿದ್ದಾಳೆ; ಅದರ ಅರಿವೇ ಆಕೆಗಿಲ್ಲ; ಆಕೆ ಯುವತಿ; ಆಕೆಗೆ ತಾನೂ ಒಬ್ಬ ಹೆಂಗಸೆಂಬುದರ ಕಲ್ಪನೆಯೂ ಉಳಿದಿಲ್ಲ. ಹಸಿದಿರುವದೊಂದೇ ಗೊತ್ತು; ಹಸಿವು ಸೌಂದರ್ಯವನ್ನೂ ಹಾಳು ಮಾಡಿತ್ತು.

ದರಬಾರದ ಪಾವಟಿಗೆಗಳ ಮೇಲೆಯೇ ಸಾಯುತ್ತಿದ್ದೇನೆ; ಸಧ್ಯಕ್ಕೆ ಭ್ರಾಂತಚಿತ್ತನಾಗಿ, ಗಾಢನಿದ್ರೆಯಲ್ಲಿ ಮಲಗಿದ್ದೇನೆ. ಕೆಲವರು ಬಂದು ನನ್ನ ಸನಿಯದರಲ್ಲಿ ನಿಲ್ಲುತ್ತಾರೆ. ನನ್ನನ್ನು ಈಕ್ಷಿಸುತ್ತಾರೆ; ಸಾವಕಾಶವಾಗಿ ತಮ್ಮ ತಮ್ಮಲ್ಲಿಯೇ ಮಾತನಾಡುತ್ತ ಮುಂದೆ ಸಾಗಿಬಿಡುವರು.

"ಸೂಳೇಮಗ್ಗ ಹಿಂದುವೆಂದು ಕಾಣುತ್ತೆ;"

ಮತ್ತೆ ಕೆಲವರು ಬರುತ್ತಾರೆ. ನಿಂತು ನನ್ನನ್ನು ನೋಡುತ್ತಾರೆ. ಅವರಲ್ಲಿ ಒಬ್ಬನು ಕೇಳಿದನು.

"ಯಾರು ನೀನು ?"

"ನನಗೆ ಹಸಿವಾಗಿದೆ" ಭಾರವಾದ ಎವೆಗಳನ್ನು ತೆರೆದು ಉತ್ತರಿಸಿದೆ.

"ಸೂಳೆಮಗ ! ಮುಸಲ್ಮಾನನಾಗಿರಬೇಕು"

ಹಸಿವು ಧರ್ಮವನ್ನೂ ಕೊಂದಿದೆ !

ಎಲ್ಲ ಕಡೆಗೂ ಕತ್ತಲಾಯಿತು. ಸಂಪೂರ್ಣ ಕತ್ತಲೆ. ಬೆಳಕಿನ ಸುಳಿವೇ ಮಾಯವಾಯಿತು.

ಎಲ್ಲೆಲ್ಲಿಯೂ ಮೌನ ! ಗಂಭೀರತೆ ಎದ್ದು ನಿಂತಿತು !! ಸುತ್ತು-ಮುತ್ತಿನ ಸ್ಥಳವೆಲ್ಲ ನಿರ್ಜನವಾಗಿತ್ತು !!!

ಒಮ್ಮೆಲೇ ದೇಗುಲ ಮತ್ತು ಚರ್ಚುಗಳಲ್ಲಿಯ ಗಂಟೆಗಳ ಹಿರಿಧ್ವನಿ ಕೇಳಿಸಿತು. ಇಡೀಯ ವಿಶ್ವವೇ ಮಧುರವಾದ ಆನಂದದ ಧ್ವನಿಯಲ್ಲಿ ಕೇಕೆ ಹಾಕಿತು; ವರ್ತಮಾನಪತ್ರ ಮಾರುವ ಹುಡುಗನು ಅಂದಿನ ಪತ್ರದಲ್ಲಿಯ ಮುಖ್ಯ ವಿಷಯವನ್ನು ಕೂಗುತ್ತಿದ್ದನು.

"ಮೂವರು ಮಹನೀಯರು ತೆರಹಾನದಲ್ಲಿ ಸೇರಿದ್ದಾರೆ................ ಹೊಸ ಜಗತ್ತು ನಿರ್ಮಾಣವಾಗುತ್ತಿದೆ !"

ಆನಂದಾತಿಶಯದಲ್ಲಿ ನನ್ನ ಕಣ್ಣುಗಳು ತೆರೆದವು; ಕೊನೆಯ ವರೆಗೆ ತೆರದೇ ಇವೆ; ನನ್ನದೆಲ್ಲ ಮುಗಿದಂತಾಗಿದೆ.

ಅಂದಿನಿಂದಲೂ ಸೋಜಿಗಗೊಂಡು ನನ್ನ ಕಂಗಳು ತೆರೆದೇ ಇವೆ.

ನಾನು ರಾಜಕಾರಣಿಯಲ್ಲ. ನಾನೊಬ್ಬ ಸಿತಾರ ನುಡಿಸುವವನು; ನಾನು ಆಳುವವರಲ್ಲೊಬ್ಬನಲ್ಲ. ಕಟ್ಟಳೆಗಳನ್ನು ಪಾಲಿಸುವವರಲ್ಲೊಬ್ಬನು; ದರಿದ್ರ ಸಂಗೀತಗಾರನಿಗೂ ಪ್ರಶ್ನೆ ಮಾಡುವ ಹಕ್ಕಿದೆ—

"ದರಿದ್ರರಾದ, ಉಪವಾಸಬಿದ್ದ, ಹತ್ತಿಕಲ್ಪಟ್ಟ ಲಕ್ಷಾಂತರ ಜನರಾದ ನಮಗೂ ಹೊಸ ಜಗತ್ತಿನ ನಿರ್ಮಾಣದಲ್ಲಿ ಪಾಲಿದೆಯೆ ?"

ಆ ಮೂವರು ಮಹಾಶಯರು ನಿರ್ಮಿಸುವ ಹೊಸ ಜಗತ್ತಿನಲ್ಲಿ ನಾನು ಜೀವಿಸಬೇಕಾಗಿರುವೆ; ಅಂತೆಯೇ ಈ ಪ್ರಶ್ನೆ ಕೇಳುತ್ತೇನೆ; ನಾನೂ 'ಫಾಸಿಜಂ' ವಿರೋಧಿಗಳಲ್ಲಿ ಒಬ್ಬನು; ಯುದ್ಧ, ಬಲಾತ್ಕಾರ, ಅನ್ಯಾಯ.............. ನಾನು ರಾಜಕಾರಣಿಯಲ್ಲ; ಸಂಗೀತದ ಅನುಭವದಿಂದ ಇಷ್ಟು ಮಾತ್ರ ಹೇಳ

ಬಲ್ಲೆ; ಶೋಕರಸದಿಂದ ತುಂಬಿದ ಹಾಡು ಕೇಳುವವರ ಕಣ್ಣುಗಳಲ್ಲಿ ನೀರನ್ನು ನಿಲ್ಲಿಸುತ್ತವೆ: ವಿಶ್ವದಲ್ಲಿ ಐವರಲ್ಲೊಬ್ಬನು ಭಾರತೀಯನಿದ್ದಾನೆ. ದಾಸ್ಯದ ಸರಪಳಿಯಿಂದ ಒಬ್ಬ ಭಾರತೀಯನನ್ನು ಇನ್ನೊಬ್ಬ ಭಾರತೀಯನೊಂದಿಗೆ ಬಿಗಿದುದರ ನೋವನ್ನು ಉಳಿದ ನಾಲ್ವರು ತಿಳಿದುಕೊಳ್ಳಲಾರರು. ನನ್ನ ಸಿತಾರದಲ್ಲಿಯ ಒಂದು ತಂತಿಯಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ, ಅದರಿಂದ ಹೊರಡುವ ರಾಗದ ಧ್ವನಿಯೇ ಬದಲಾಗುವದು. ಸಂಗೀತ ಅಪಸ್ವರಕ್ಕಿಟ್ಟು, ತಾಳ ತಪ್ಪಿಬಿಡುತ್ತದೆ. ವಿಶ್ವದಲ್ಲಿ ಒಂದು ಜೀವಿಗೆ ಅನ್ನ ದೊರೆಯದ ಸ್ಥಿತಿಯಿರುವ ತನಕ ಇಡೀ ವಿಶ್ವವೇ ಬಡತನದಲ್ಲಿರಬೇಕಾಗುವದು; ಒಬ್ಬನು ಬಡತನದಲ್ಲಿದ್ದುದಾದರೆ ಅಖಿಲ ವಿಶ್ವವೇ ಬಡತನದಲ್ಲಿರಬೇಕಾಗುವದು; ಒಬ್ಬನು ದಾಸ್ಯದಲ್ಲಿದ್ದುದಾದರೆ ವಿಶ್ವದಲ್ಲಿಯ ಪ್ರತಿಯೊಬ್ಬನೂ ಬಂಧನದಲ್ಲಿರಬೇಕಾಗುವದು.

ಅಂತೆಯೇ ನಾನು ನಿಮಗೆ ಈ ಪ್ರಶ್ನೆಯನ್ನು ಕೇಳಿದ್ದು.

ನಾನು ಸತ್ತವನೆಂದು ತಿಳಿಯಬೇಡಿರಿ. ಸತ್ತವರು ನೀವು! ನಾನು ಜೀವಂತನಿದ್ದೇನೆ; ನನ್ನ ನಿರ್ಜೀವ ಕಣ್ಣುಗಳೇ ನಿಮಗೆ ಸದಾ ಈ ಪ್ರಶ್ನೆಯನ್ನು ಕೇಳುವದಿಲ್ಲವೇ? ನೀವು ಬೇಕಾದಲ್ಲಿ ಹೋಗಿರಿ; ನಿಮ್ಮನ್ನು ಹಿಂಬಾಲಿಸುತ್ತೇನೆ. ನೀವು ಮಲಗಿದಾಗಲೂ ನಿಮ್ಮೆದುರು ನಿಲ್ಲುತ್ತೇನೆ. ನಿಮ್ಮ ಸುಖ ಸ್ವಪ್ನಗಳನ್ನೆಲ್ಲ ದುಃಸ್ವಪ್ನಗಳನ್ನಾಗಿ ಮಾಡುತ್ತೇನೆ. ನಿಮ್ಮ ಜೀವಿತವನ್ನು ಸಹಿಲಸಾಧ್ಯವಾಗಿ ಮಾಡುತ್ತೇನೆ; ನನ್ನ ಕಾಟದಿಂದ ನಿಮಗೆ ಮಾತನಾಡುವದು, ತಿನ್ನುವದು, ಕುಡಿಯುವದು, ಕೆಲಸ ಮಾಡುವದು ಅಸಾಧ್ಯವಾದೀತು! ನೀವು ನನ್ನ ಪ್ರಶ್ನೆಗೆ ಉತ್ತರ ಕೊಡಲೇಬೇಕು. ನನಗೆ ಒಪ್ಪಿಗೆಯಾಗುವತನಕ ಉತ್ತರ ದೊರೆಯುವವರೆಗೆ ನಾನು ಸಾಯುವದಿಲ್ಲ; ಸಾಯುವದೇ ಇಲ್ಲ!

ಹೊಸ ಜಗತ್ತಿನಲ್ಲಿ ನಾನು ಬದುಕಬೇಗಂದು ಮಾತ್ರ ಈ ಪ್ರಶ್ನೆಯನ್ನು ಕೇಳುವದಿಲ್ಲ.

ನನ್ನ ಕಡಲಕನ್ನೆಯನ್ನು ಬೀದಿಯ ಪಕ್ಕದಲ್ಲಿ ಹುಗಿಯದೆ ಬಿಸುಟಿದ್ದೇನೆ; ನನ್ನ ಕೈಯಲ್ಲಿ ಕಟ್ಟಿಗೆಯ ಗಿಲಗಂಜಿಯಿದೆ........................ಅಂತೆಯೇ ನಿಮ್ಮೆಲ್ಲರಿಗೆ ಈ ಪ್ರಶ್ನೆಯನ್ನು ಕೇಳುತ್ತಿದ್ದೇನೆ.

## ವಿ. ಚಿ. ಹಿತ್ತಲಮನಿ ಅವರ ಪುಸ್ತಕಗಳು

### ಅಚ್ಚಾಗಿರುವವು

೧. ಮದುವೆಯ ಗುರಿ (ಲೈಂಗಿಕ ವಿಜ್ಞಾನ ಪ್ರಬಂಧ)

೨. ದಿವ್ಯ ಪ್ರೇಮ (ಕಥಾ ಸಂಗ್ರಹ)

೩. ಅನ್ನದಾತ (ಬಂಗಾಲದ ಕತೆ)

### ಅಚ್ಚಿನಲ್ಲಿರುವವು

೪. ಗೊಬ್ಬರ (ಒಕ್ಕಲುತನದ ವಿಜ್ಞಾನ ಪ್ರಬಂಧ)

೫. ಭೂಮಿಗಿಳಿದ ತಾರೆ (ಕಥಾಸಂಗ್ರಹ)

೬. ರಸ—ವಿರಸ (ಕಥಾ ಸಂಗ್ರಹ)

### ಅಚ್ಚಿಗಾಗಿ ಕಾದಿರುವವು

೭. ನನ್ನ ಸ್ವಾಮಿ (ಕಥಾಸಂಗ್ರಹ)

೮. ಹಾಲು (ವಿಜ್ಞಾನ ಪ್ರಬಂಧ)

೯. ಸೋಯಾಬೀನ (ಒಕ್ಕಲುತನದ ಪ್ರಬಂಧ)

೧೦. ತಾಂಡವ ನೃತ್ಯ (ದೊಂಬಿಯ ಕತೆಗಳು)

೧೧. ವೀರಸ್ವರ್ಗ (ಸ್ವಾತಂತ್ರ್ಯದ ಕತೆಗಳು)

೧೨. ಸಂಚಕಾರ (ಬರಗಾಲದ ಕತೆಗಳು)